## *QUICK FACTS*

| | | |
|---|---|---|
| ☞ *Earlier Name* | – | *Shri Jayaramacharya* |
| ☞ *Father's Name* | – | *Purushottamacharya (Shri Vadeendra Teertha).* |
| ☞ *Ashram Guru* | – | *Shri Varadendra Teertha* |
| ☞ *Ashram Year* | – | *1975-76* |
| ☞ *Entered Brindawana in* | – | *1785-86* |
| ☞ *Ashrama Shishya* | – | *Shri Bhuvanendra Teertha* |
| ☞ *Brindawana* | – | *at the bank of Varada River, Hosa Ritti, Haveri Dist* |

### *Treatises written by Dheerendra Teertha -*

- *NarayanOpanishat Vyakyana*
- *Vishayavakya sangraha*
- *Manyusooktha Vyakyana*
- *AmbhruNIsooktha Vyakyana*
- *GuruguNastavana Vyakyana*
- *Balitta sooktha Vyakyana*
- *Vyakyana on Sri Raghavendra Stotra*
- *Karakavaadaartha*

# ಶ್ರೀ ಸಾತಾರಿ ಆಚಾರ್ಯರು ರಚಿಸಿರುವ ಶ್ರೀ ಧೀರೇಂದ್ರಾಷ್ಟಕಮ್

**ಉಕ್ತಿಃಪ್ರಕ್ರಮಣೇ ಗುರೋರ್ವಿಜಯತೇ ಯುಕ್ತಿಶ್ಚ ಯಸ್ಯ ಪ್ರಭೋಃ**
**ಭಕ್ತಿಶ್ರೀಪತಿಭೂಮಿಜಾಪರಿವೃಢೇ ಮುಕ್ತಿಪ್ರದಾಯಿನ್ಯಹೋ ।**
**ಶಕ್ತಿಶ್ಚಾಪ್ಯತುಲಾ ಸದಾಪ್ರವಚನೇ ಶಕ್ತಿಶ್ಚ ದೀನೇ ದಯಾ**
**ವ್ಯಕ್ತಿರ್ಧೀರಜನೇಂದ್ರ ತೇ ಗುಣಗಣಾನ್ ವಕ್ತುಂ ಸ್ಫುಟಂ ಕೋ ಭುವಿ ॥ 1 ॥**

ತಾತ್ಪರ್ಯ :

ಭಗವಂತನ ಮೇಲೆ ಅವಿಚ್ಛಿನ್ನವಾದ ಭಕ್ತಿಯುಳ್ಳ, ಅಸಾಧಾರಣವಾದ ಪಾಂಡಿತ್ಯ ಇರುವ, ಸದಾ ಪ್ರವಚನಗಳಲ್ಲಿ ಆಸಕ್ತರಾಗಿರುವ, ದಯೆಯುಳ್ಳವರಾದ, ಭಕ್ತರ ವಿಷಯಗಳಲ್ಲಿ ಕರುಣೆ ತೋರುವ, ಶ್ರೇಷ್ಠಗುಣಗಳುಳ್ಳ ತಮ್ಮ ಸದ್ಗುಣಗಳನ್ನು ವರ್ಣಿಸಲು ಈ ಭೂಲೋಕದಲ್ಲಿ ಯಾರು ತಾನೆ ಶಕ್ಯರು?

**ಸ್ಥಾಯನ್ನ್ಯಾಯನಯೇ ಕಣಾದಮುನಯೇ ವಿದ್ವೇಷಿವಿದ್ವಜ್ಜಯೇ**
**ತೂರ್ಣಂ ಪೂರ್ಣಧಿಯೇ ಪುನಸ್ಸನಕಯೇ ಸನ್ಯಾಸಿನಾಂ ಸಂಚಯೇ ।**
**ಚಾತುರ್ಯಾತಿಶಯೇ ಕಲಾಸುಗುರಯೇ ಧೈರ್ಯೋಚ್ಚಯೇ ಮೇರಯೇ**
**ಶ್ರೀಧೀರೇಂದ್ರಯತೀಂದ್ರ ದಾನವಿಷಯೇ ತೇಽದ್ಯಾಪಿ ಕಲ್ಪದ್ರಯೇ ॥ 2 ॥**

ತಾತ್ಪರ್ಯ :

ಶ್ರೀ ಧೀರೇಂದ್ರ ಯತಿವರೇಣ್ಯರೇ, ತಾವು ತರ್ಕಶಾಸ್ತ್ರದಲ್ಲಿ ಕಣಾದ ಮುನಿಗಳಂತೆ ಇರುತ್ತೀರಿ. ಕುಶಾಸ್ತ್ರ ಪಂಡಿತರನ್ನು ಸೋಲಿಸುವುದರಲ್ಲಿ ಶ್ರೀ ಆನಂದತೀರ್ಥರಂತೆ ಇರುತ್ತೀರಿ. ವೈರಾಗ್ಯದಲ್ಲಿ ಶ್ರೀ ಸನಕ ಮುನಿಯಂತಿದ್ದೀರಿ, ಪಂಡಿತೋತ್ತಮರಾದ ದೇವ ಗುರು ಬೃಹಸ್ಪತಿಯಂತೆ ಅಗಾಧ ಪಾಂಡಿತ್ಯವನ್ನು ಹೊಂದಿರುವಿರಿ. ಧೈರ್ಯದಲ್ಲಿ ಮೇರುಪರ್ವತ ಮತ್ತು ದಾನ ಮಾಡುವಿಕೆಯಲ್ಲಿ ಕಲ್ಪವೃಕ್ಷದಂತೆ ಇರತ್ತೀರಿ.

**ಶ್ರೀಲಃಶ್ರೀಪತಿವತ್ಸರೋರುಹಜಸ(ಲ)ದ್ವಾಣೀ ವಿಲಾಸ್ಪದಃ**
**ಶಂಭುರ್ವಾ ವೃಷಸಂಭವ ಸ್ಸವಿತೃವತ್ಸಚ್ಚಕ್ರವಾಕಪ್ರಿಯಃ ।**
**ದೇವೇಂದ್ರಶ್ಚ ಸುಧಾರ್ಥದೋ ಹಿಮಗುವದ್ಭೂ(ಯ) ಕಲನಾಂನಿಧಃ**
**ಶ್ರೀಧೀರೇಂದ್ರಯತೀಶ್ವರೋ ಮಮಗುರುಃ ದದ್ಯಾದಭೀಷ್ಟಂ ಸದಾ ॥ 3 ॥**

ತಾತ್ಪರ್ಯ :

ಶ್ರೀಲಕ್ಷ್ಮೀಪತಿಯಾದ ಶ್ರೀಮನ್‌ನಾರಾಯಣನಂತೆ ಸಂಪತ್ತನ್ನುಳ್ಳವರಾಗಿಯೂ, ಸರಸ್ವತಿದೇವಿಯ ಪತಿಯಾದ ಚತುರ್ಮುಖ ಬ್ರಹ್ಮನಂತೆ ವಾಣಿಯ ವೈಭವದಿಂದ ಕೂಡಿದವರಾಗಿಯೂ, ಧರ್ಮಾನುಷ್ಠರಾದ ಶಂಕರನಂತೆಯೂ, ಚಕ್ರವಾಕ ಪಕ್ಷಿಗಳಿಗೆ ಪ್ರೀತಿಯಾದ ಸೂರ್ಯನಂತೆ, ಸುಧೆಯನ್ನುಣಿಸುವ ದೇವೇಂದ್ರನಂತೆಯೂ, ಷೋಡಶಕಲಾ ಪರಿಪೂರ್ಣನಾದ ಚಂದ್ರನಂತಿರುವ ಶ್ರೀಧೀರೇಂದ್ರತೀರ್ಥರು ನಮ್ಮ ಇಷ್ಟಾರ್ಥಗಳನ್ನು ಸರ್ವದಾ ಪೂರೈಸಲಿ.

**ಸಂಸ್ಥಾನಾಧಿಪತಿರ್ಯತೀಂದ್ರಭುವನೇಂದ್ರಾರ್ಯಸ್ಸಮಂ ಸಜ್ಜನೈಃ**
**ಯಸ್ಮಾತ್ಸಮ್ಯಗಧೀತವಾನ್ ದಶಮತೇಶ್ಯಾಸ್ತ್ರೋಕ್ತ ತತ್ತ್ವಂ ಪರಮ್ ।**
**ಕಿಂ ಬ್ರೂಮೋಽನ್ಮಜನಸ್ಸುದರ್ಶನ ಮಹಾಚಾರ್ಯಃ ಪ್ರವರ್ಯಸ್ಸತಾಂ**
**ಶ್ರೀಧೀರೇಂದ್ರಯತೀಶ್ವರೋ ಮಮಗರುಃ ದದ್ಯಾದಭೀಷ್ಟಂ ಸದಾ ॥ 4 ॥**

ತಾತ್ಪರ್ಯ :

ಸಜ್ಜನರಿಂದ ಪೂಜಿತವಾದ ಮತ್ತು ಸಂಸ್ಥಾನಾಧಿಪತಿಯಾದ ಶ್ರೀಭುವನೇಂದ್ರತೀರ್ಥರು ಮತ್ತು ಶ್ರೀವೈಷ್ಣವ ಮತಕ್ಕೆ ಸೇರಿದ ಶ್ರೀ ಸುದರ್ಶನಾಚಾರ್ಯರು, ಪಂಡಿತೋತ್ತಮರಾದ ನಿಮ್ಮಲ್ಲಿ ಅಧ್ಯಯನ ಮಾಡಿದರು. ಇಂತಹ ನಮ್ಮ ಗುರುಗಳಾದ ಶ್ರೀಧೀರೇಂದ್ರತೀರ್ಥರು ನಮ್ಮ ಇಷ್ಟಾರ್ಥಗಳನ್ನು ಕರುಣಿಸಲಿ.

**ಸಪ್ತತ್ರಿಂಶತಿಭೂರಿಭೋಧರಿಚಿತೇ ಗ್ರಂಥೇ ಜಯಾರ್ಯೋದಿತೇ**
**ಪದ್ಧತ್ಯಾದಿನಿಬಂಧನೇ ವರುಸುಧಾತತ್ತ್ವಪ್ರಕಾಶಾದಿಕೇ ।**
**ಏತತ್ತತ್ತಮಿದಂ ಸುಬೋಧಮಿಹದುರ್ಭೋಧಂ ವ್ಯನಕ್ತೀವ ಯಃ**
**ವ್ಯಾಖ್ಯಾನಂ ಪ್ರಕಟೀಕರೋತಿ ಸಮತಿಂ ಧೀರೇಂದ್ರತೀರ್ಥಂ ಭಜೇ ॥5 ॥**

ತಾತ್ಪರ್ಯ :

ಶ್ರೀಮಧ್ವಾಚಾರ್ಯರ ಹಾಗೂ ಪ್ರಾಚೀನ ಗ್ರಂಥಗಳಿಗೆ ಸರಳವಾಗಿ ಅರ್ಥ ಹೇಳಿ ತತ್ವಸೂರಿಗಳಿಗೆ ಮಹೋಪಕಾರ ಮಾಡಿರುವ ಸಂಪ್ರದಾಯಾರ್ಥ ವಿಚಕ್ಷಣ ಶ್ರೀಧೀರೇಂದ್ರ ಯತಿಗಳನ್ನು ಭಜಿಸುತ್ತೇನೆ.

**ಯಸ್ಯೋಪನ್ಯಸನಂ ಚ ನಾತಿ ಜವನಂ ನಾತಿತ್ವರಂ ಸತ್ವರಂ**
**ಸಾಂದ್ರಂ ನ ಸ್ಖಲನಂ ಸ್ವಪಕ್ಷಸುಪರಿಷ್ಕಾರಪ್ರಕಾರಕ್ಷಮಮ್ ।**
**ದಕ್ಷಂ ಮಂಕ್ಷುವಿಪಕ್ಷಕಕ್ಷದಲನೇ ವಿದ್ವದ್ವಿಕಕ್ಷಂ ಮುಹುಃ**
**ಶ್ರೀಧೀರೇಂದ್ರಯತೀಶ್ವರೋ ಮಮಗುರುಃ ದದ್ಯಾದಭೀಷ್ಟಂ ಸದಾ ॥ 6 ॥**

ತಾತ್ಪರ್ಯ :

ಶ್ರೀಧೀರೇಂದ್ರತೀರ್ಥರ ಉಪನ್ಯಾಸ ವೈಖರಿ ಬಲು ಮೆಚ್ಚುವುದು. ಇವರ ಉಪನ್ಯಾಸದ ಶೈಲಿ ಅತಿ ವೇಗವೂ ಇಲ್ಲ, ನಿಬಿಡತೆಯೂ ಇಲ್ಲ. ಸಮೀಚಿನವಾದ ಪ್ರಮೇಯಗಳನ್ನು ಕೊಟ್ಟು ಶಾಸ್ತ್ರವನ್ನು ನಿರೂಪಿಸುವರು. ಪ್ರತಿವಾದಿಗಳ ಪ್ರತಿಕ್ರಿಯೆಗಳನ್ನು ಖಂಡತುಂಡವಾಗಿ ಖಂಡಿಸುತ್ತಾರೆ. ಇಂತಹ ಗುರುಗಳಾದ ಶ್ರೀಧೀರೇಂದ್ರತೀರ್ಥರು ನಮ್ಮನ್ನು ಯಾವಾಗಲೂ ಅನುಗ್ರಹಿಸಲಿ.

**ಯಾವಚ್ಛಾವಕಲೋಕಸಂಶಯಹರಂ ತತ್ತ್ವಾರ್ಥಸಂಭೋಧಕಂ**
**ಯದ್ವ್ಯಾಖ್ಯಾನಮಹೋ ದೃಢೋತ್ತರಯುತಂ ಸತ್ಸಂಪ್ರದಾಯಾನ್ವಿತಮ್ ।**
**ಲೋಢ್ಯಂತೇ ಭುವಿ ಕೇ ನಿಶಮ್ಯ ವಸುಧಾ ಸರ್ವಂಮಹಾಮಂಡಲೇ**
**ಶ್ರೀಧೀರೇಮದ್ರಯತೀಶ್ವರೋ ಮಮಗುರುಃ ದದ್ಯದಭೀಷ್ಟಂ ಸದಾ ॥ 7 ॥**

ತಾತ್ಪರ್ಯ :

ಗುರುವರೇಣ್ಯರಾದ ಶ್ರೀಧೀರೇಂದ್ರತೀರ್ಥರು ರಚಿಸಿದ ಅನೇಕ ಸೂಕ್ತಗಳ ಟಿಪ್ಪಣಿ, ವ್ಯಾಖ್ಯಾನಗಳನ್ನು ಓದಿದವರಿಗೆ ಅನೇಕ ಸಂದೇಹ ಭ್ರಾಂತಿಗಳನ್ನು ಪರಿಹರಿಸುವುವು. ಇಂತಹ ಕೃತಿಗಳನ್ನು ಯಾರು ತಾನೆ ವಿರೋಧ ಮಾಡಿಯಾರು? ಇಂತಹ ಗುರುಗಳು ನಮ್ಮ ಇಷ್ಟಾರ್ಥವನ್ನು ಯಾವಾಗಲೂ ದಯಪಾಲಿಸಲಿ.

**ಗಂಗಾತೀರ್ಥಮುಖಾಗ್ರತೀರ್ಥಗಮನಂ ತನ್ಮ ಜ್ಞನಂ ಸಜ್ಜನೈಃ**
**ವೇದವ್ಯಾಸ ಸುಮೂಲಸದ್ರಘುಪತೇಃ ಕುರ್ವನ್ ಸಪರ್ಯಾಂ ಮುಹುಃ ।**

**ಸಾತಾರಾಪುನಯಾದಿರಾಜನಗರೇ ತದ್ರಾಜಕೈಃ ಸೇವಿತಃ**
**ಶ್ರೀಧೀರೇಂದ್ರಯತೀಶ್ವರೋ ಮಮಗುರುಃ ದದ್ಯಾದಭೀಷ್ಟಂ ಸದಾ ॥ 8 ॥**

**ತಾತ್ಪರ್ಯ :**

ಯತಿವರೇಣ್ಯರಾದ ಶ್ರೀಧೀರೇಮದ್ರತೀರ್ಥರು ಅನೇಕ ತೀರ್ಥಯಾತ್ರೆಗಳನ್ನು ಮಾಡಿ, ಕುವಾದಿಗಳನ್ನು ಜಯಿಸುತ್ತಾ ಅನೇಕ ರಾಜಮಹಾರಾಜರಿಂದ ಪೂಜಿತವಾಗಿ ಶ್ರೀ ವೇದವ್ಯಾಸದೇವರ ಪೂಜೆ ಮಾಡುತ್ತಾ, ಮಧ್ವಸಿದ್ಧಾಂತದ ಜಯ ಪತಾಕೆಯನ್ನು ಅಂಬರದಲ್ಲಿ ಹಾರಿಸಿದರು. ಇಂತಹ ನಮ್ಮ ಗುರುಗಳಾದ ಶ್ರೀಧೀರೇಂದ್ರತೀರ್ಥರು ನನ್ನ ಇಷ್ಟಾರ್ಥಗಳನ್ನು ಯಾವಾಗಲೂ ಕರುಣಿಸಲಿ.

॥ ಇತಿ ಶ್ರೀಸಾತಾರಿ ಆಚಾರ್ಯ ವಿರಚಿತಂ ಶ್ರೀಧೀರೇಂದ್ರದ್ರಾಷ್ಟಕಂ ಸಂಪೂರ್ಣಮ್ ॥



# ಶ್ರೀ ಧೀರೇಂದ್ರಾಷ್ಟಕಮ್

(ಸ್ತೋತ್ರ ಮುಕ್ತಾವಲೀ ಇಂದ ಆಯ್ದುಕೊಳ್ಳಲಾಗಿದೆ)

ಮಹಾರಾಷ್ಟ್ರದ ವಾಯಿಗುರುರಾಜಾಚಾರ್ಯರ ಪುತ್ರ ಅಣ್ಣಾಚಾರ್ಯರು ಬರೆದ ಸ್ತೋತ್ರವಿದು. ಶ್ರೀ ಧೀರೇಂದ್ರತೀರ್ಥರು ತನ್ನ ಇಷ್ಟಾರ್ಥವನ್ನೆಲ್ಲ ಕರುಣಿಸುವಂತೆ ಸ್ತುತಿಕಾರರು ಯಾಚಿಸುತ್ತಿರುವರು.

ಶ್ರೀ ಧೀರೇಂದ್ರತೀರ್ಥರು ಶ್ರೀರಾಮಪಾದಕಮಲಮಧುಪರು. ಆನಂದತೀರ್ಥರ ಶಾಸ್ತ್ರ ಸಮುದ್ರದಲ್ಲಿ ವಿಹರಿಸುವವರು, ದೀನರಕ್ಷಕರು, ಪರಮವಿರಾಗಿಗಳು, ಭಜಕರಿಗೆ ನಾನಾವಿಧ ಇಷ್ಟಾರ್ಥಪ್ರದರು, ಭಜಕರ ಘೋರ ರೋಗಗಳನ್ನು ನಾಶಮಾಡುವವರು, ಶ್ರೀವಾಯುದೇವರ-ಶ್ರೀಜಯತೀರ್ಥರ ಕೃಪೆಗೆ ಪಾತ್ರರಾದವರು, ನಿಜಸೇವಕರ ಭಾವಬ್ಧಿತಾರಕರು, ದುರ್ವಾದಿಗಳೆಂಬ ಆನೆಗಳನ್ನು ದಮನ ಮಾಡುವ ಮೃಗೇಂದ್ರರು, ಪ್ರತ್ಯರ್ಥಿ ಪಂಡಿತರನ್ನು ಪರಾಜಯಿಸುವುದರಲ್ಲಿ ದಕ್ಷವಾದ ದೀಕ್ಷೆ ತೊಟ್ಟವರು, ಸಚ್ಛಿಷ್ಯರೆಂಬ ಚಾತಕ ಪಕ್ಷಿಗಳಿಗೆ ಮೇಘವನ್ನು ಸುರಿಸುವವರು. ಅಸೀಮ ಮಹಿಮೆಯಿಂದ ಲೋಕವಂದ್ಯರಾದವರು, ವರದಾತಟನಿವಾಸಿಗಳೂ ಆದ ಶ್ರೀ ಧೀರೇಂದ್ರತೀರ್ಥರನ್ನು ವಂದಿಸುತ್ತ, ಪಠಿಸುವವರ ಪಾಪ ಕಳೆಯುವ ಈ ಸ್ತೋತ್ರವನ್ನು ಶ್ರೀ ಧೀರೇಂದ್ರತೀರ್ಥ ಹೃದ್ಗುಹಾಶ್ರಯನಾದ ಭಗವಂತನಿಗೆ ಅರ್ಪಿಸುತ್ತಿರುವರು.

* * * *

ಶ್ರೀರಾಮಪಾದಸರಸೀರುಹಷಟ್ಪದೇಂದ್ರ
ಧೀರೇಂದ್ರವಂದಿತಪದಾಂಬುಜತಾಪಸೇಂದ್ರ ।
ತಾಪತ್ರಯಘ್ನಕರುಣಾಮೃತಪೂರಿತಾಕ್ಷ
ಧೀರೇಂದ್ರತೀರ್ಥ ! ಮಮ ದೇಹಿ ಸಮಸ್ತಮಿಷ್ಟಮ್ ॥ 1 ॥

ಆನಂದತೀರ್ಥಸಮಯಾಬ್ಧಿತಿಮಿಂಗಿಲೇಶ
ದೀನಾವಲೀಶರಣಸದ್ಗುಣರತ್ನಶಾಲಿನ್ ।
ವೈರಾಗ್ಯಭಾಗ್ಯವರದಾತಟನೀತಟಸ್ಥ
ಧೀರೇಂದ್ರತೀರ್ಥ ! ಮಮ ದೇಹಿ ಸಮಸ್ತಮಿಷ್ಟಮ್ ॥ 2 ॥

ಪದ್ಮಾಕ್ಷಮಂಜುತುಲಸೀನವಮಾಲ್ಯಶೋಭಿನ್
ಕಾಷಾಯಚೈಲಧರಭೂಷಿತಸಜ್ಜನಾನಾಮ್ ।
ನಾನಾವಿಧೇಷ್ಟದ ಸದಾ ಭಜತಾಂ ಜನಾನಾಂ
ಧೀರೇಂದ್ರತೀರ್ಥ ! ಮಮ ದೇಹಿ ಸಮಸ್ತಮಿಷ್ಟಮ್ ॥ 3 ॥

ಘೋರಾಮಯಘ್ನ ಭಜತಾಂ ವಸುಧಾತಲೇಽಸ್ಮಿನ್
ಗೀರ್ವಾಣಭೂರುಹ ಸುಧಾರ್ಣವಪಾರದೃಶ್ವನ್ ।
ಸನ್ಮಾತರಿಶ್ವಜಯಯೋಗಿ ಕೃಪಾಸುಪಾತ್ರ
ಧೀರೇಂದ್ರತೀರ್ಥ ! ಮಮ ದೇಹಿ ಸಮಸ್ತಮಿಷ್ಟಮ್ ॥ 4 ॥

ಸಲ್ಲೋಕಕೋಕತರಣೇ ತರಣೇ ಭವಾಬ್ಧೇಃ
ನಿಷ್ಣಾತಸೇವಕಜನಸ್ಯ ರಹಸ್ಯವೇತ್ತುಃ ।
ದುರ್ವಾದಿಕುಂಜರವಿಮರ್ದನಕೇಸರೀಂದ್ರ
ಧೀರೇಂದ್ರತೀರ್ಥ ! ಮಮ ದೇಹಿ ಸಮಸ್ತಮಿಷ್ಟಮ್ ॥ 5 ॥

ವೃಂದವನಸ್ಥವರದೇಂದ್ರಕರಾಂಬುಜೋತ್ಥ
ಶ್ರುತ್ಯರ್ಥಸಾರವಿದನಂತಗವೀಷ್ಟನಂತ ।
ಶ್ರೀವಲ್ಲಭಾರ್ಪಿತಸುಚಂದನಭೂಷಿತಾಂಗ
ಧೀರೇಂದ್ರತೀರ್ಥ ! ಮಮ ದೇಹಿ ಸಮಸ್ತಮಿಷ್ಟಮ್ ॥ 6 ॥

ಪ್ರತ್ಯರ್ಥಿಪಂಡಿತಪರಾಜಯದಕ್ಷದೀಕ್ಷ
ಸಚ್ಛಿಷ್ಯಚಾತಕಘನಾಘನಕಾಮಧೇನೋ ।
ಭೂಮೌ ಸದಾ ಪ್ರಣಮತಾಮಮರಸ್ವಭಾವ
ಧೀರೇಂದ್ರತೀರ್ಥ ! ಮಮ ದೇಹಿ ಸಮಸ್ತಮಿಷ್ಟಮ್ ॥ 7 ॥

ಕಾಮಾರಿವೈರಿದಮನ ಸ್ಥಿರಸಂಘಬಂಧೋ
ಕಾಮಾರಿವೈರಿಜಯಿನಾಂ ಮಹತಾಂ ಮುನೀನಾಮ್ ।
ಸೀಮಾತಿದೂರಮಹಿಮಾಚಿತಲೋಕವಂದ್ಯ
ಧೀರೇಂದ್ರತೀರ್ಥ ! ಮಮ ದೇಹಿ ಸಮಸ್ತಮಿಷ್ಟಮ್ ॥ 8 ॥

ವಾಯೀಪ್ರಸಿದ್ಧಗುರುರಾಜಸುತೋಽಣ್ಣನಾಮಾ
ಚಕ್ರೇ ಸದಷ್ಟಕಮಿದಂ ಪಠತಾಮಘಘ್ನಂ ।
ಧೀರೇಂದ್ರತೀಥಹೃದಯಾಮಲಮಂದರಿಸ್ಥಃ
ಪ್ರೀತೋಸ್ತ್ವನೇನ ಸುಸತಾಂ ಜನಕಾತ್ಮಜೇಶಃ ॥ 9 ॥

॥ ಇತಿ ವಾಯಿಗುರುರಾಜಾಚಾರ್ಯಸೂನು ಅಣ್ಣಾಚಾರ್ಯವಿರಚಿತಾ
ಶ್ರೀಧೀರೇಂದ್ರಾಷ್ಟಕಂ ಸಂಪೂರ್ಣಮ್ ॥



# ಶ್ರೀ ಮದ್ಧೀರೇಂದ್ರಾಮಂಗಳಾಷ್ಟಕವ್

ಜಾತಃ ಶ್ರೀವರದೇಂದ್ರತೀರ್ಥಜಲಧೇಃ ವಿದ್ವಚ್ಚಕೋರಪ್ರಿಯಃ
ನಿತ್ಯಂ ವಿಷ್ಣುಪಾದಾಶ್ರಿತಃ ಶ್ರಿತಮನಸ್ತಾಪಾಪಹಂ ಸನ್ನುತಃ ।
ಧ್ವಸ್ತಾಶೇಷಕುವಾದದುಃಸಹತಮಸ್ತೋಮಃ ಕಲಾಪೂರಿತಃ
ಶ್ರೀಮದ್ಧೀರಜನೇಂದ್ರತೀರ್ಥಯಮಿರಾಟ್ ದದ್ಯಾದ್ಧ್ರುವಂ ಮಂಗಲಮ್ ॥ 1 ॥

ವಾಣೀ ಯಸ್ಯ ಕುವಾದಿದಂಭ ದಲನೇ ತೂರ್ಣಂ ಮೃಗೇಂದ್ರಾಯತೇ
ದೃಷ್ಟಿರ್ಭಕ್ತಮಹಾಘಭೂಧರಮಣೇಃ ವಜ್ರಾಯತೇ ಭೇದನೇ ।
ಚೇತೋ ಮೂಲರಘೂದ್ವಹಾಂಘ್ರಿನಲಿನದ್ವಂದ್ವೇ ದ್ವಿರೇಫಾಯಿತೇ
ಶ್ರೀಮದ್ಧೀರಜನೇಂದ್ರತೀರ್ಥಯಮಿರಾಟ್ ದದ್ಯಾದ್ಧ್ರುವಂ ಮಂಗಲಮ್ ॥ 2 ॥

ನ್ಯಾಯೇ ಯಂ ಕುಲಯಂತಿ ಗೌತಮಮುನಿಂ ದುರ್ವಾದಿವಿದ್ವಜ್ಜಯೇ
ಪೂರ್ಣಪ್ರಜ್ಞಗುರುಂ ಯತೀಂದ್ರನಿಚಯೇ ಪ್ರಷ್ಟುರ್ಮನೋಜಂ ಮುನಿಮ್ ।
ಧೈರ್ಯೇ ಮೇರುಮಹೀಧರಂ ಬುಧವರಾಃ ದಾನೇ ಚ ದೇವದ್ರುಮಂ
ಶ್ರೀಮದ್ಧೀರಜನೇಂದ್ರತೀರ್ಥಯಮಿರಾಟ್ ದದ್ಯಾದ್ಧ್ರುವಂ ಮಂಗಲಮ್ ॥ 3 ॥

ಶ್ರೀಮನ್ಮಧ್ವಮತಾಂಬುಧಾಮಹಿಮಗುಃ ಪಾಪಾಚಲೇ ವಾಸವೋ
ವಿದ್ವತ್ಪಂಕಜಚಂಡಭಾ ರಘುಪತೇ ಸಂಸೇವನೇ ಕೀಶರಾಟ್ ।
ಶಂಭುಃ ಕಾಮಿತಕಲ್ಪನೇ ಫಣಿಪತಿರ್ವ್ಯಾಖ್ಯಾನಕರ್ಮಣ್ಯಲಂ
ಶ್ರೀಮದ್ಧೀರಜನೇಂದ್ರತೀರ್ಥಯಮಿರಾಟ್ ದದ್ಯಾದ್ಧ್ರುವಂ ಮಂಗಲಮ್ ॥ 4 ॥

ಪಾತುಂ ಪಾವನಪಾವನಾಗಮವಿಧಃ ಸ್ತಪ್ತಾಂ ಕಲೇಃ ಕಾಲತಃ
ಮಗ್ನಾನ್ ದುಹಖಪಯೋನಿಧಾವಭಿಮತಾನ್ ದತ್ವಾ ವರಾನ್ನೈಕಶಃ ।

ಪ್ರಾಪ್ನೋರ್ವ್ಯಾಮಿತಿ ಭೋಧನಾಯ ವರದಾತೀರೇ ಚ ರಾರಾಜತೇ
ಶ್ರೀಮದ್ಧೀರಜನೇಂದ್ರತೀರ್ಥಯಮಿರಾಟ್ ದದ್ಯಾದ್ಧ್ರುವಂ ಮಂಗಲಮ್ ‖ 5 ‖

ಯೇನಾಭೇದಿ ಕುವಾದಿಗರ್ವಕರಿರಾಟ್ ಕುಂಭಸ್ಥಲೀ ನಿಸ್ತುಲಂ
ಯೇನಾರಾಧಿ ಮಹೀಜಜಾನಿರಘುರಾಟ್ ಕಂಜೋದ್ಭವೇನಾರ್ಚಿತಃ ।
ಯೇನಾಸೇವಿ ಯಮೀಂದ್ರಸನ್ನುತಪದಃ ಶ್ರೀರಾಘವೇಂದ್ರಪ್ರಭುಃ
ಶ್ರೀಮದ್ಧೀರಜನೇಂದ್ರತೀರ್ಥಯಮಿರಾಟ್ ದದ್ಯಾದ್ಧ್ರುವಂ ಮಂಗಲಮ್ ‖ 6 ‖

ಸಂಸೇವ್ಯಾಂ ವಿಬುಧೋತ್ತಮೈರ್ಜನಿಮೃತೀ ವಿಧ್ವಂಸಿನೀಂ ಪಾವನಾಂ
ವಿಷ್ಣೋಃಪ್ರೀತಿಕರಿಂ ಸಮೀರಸಮಯಕ್ಷೀರೋಧಿಜಾಂ ಸತ್ಸುಧಾಮ್ ।
ಸ್ನಿಗ್ಧಾಂ ನಾಲ್ಪಮುದಾವಹಾಂ ಪರಿಮಲಾದ್ಯೋಪಾಯಯತ್ತತ್ತತಿಂ
ಶ್ರೀಮದ್ಧೀರಜನೇಂದ್ರತೀರ್ಥಯಮಿರಾಟ್ ದದ್ಯಾದ್ಧ್ರುವಂ ಮಂಗಲಮ್ ‖ 7 ‖

ಯೋಽಕಾರ್ಷೀತ್ ವಿವೃತಿಂ ಗುರೋರ್ಗುಣನುತೇರ್ಮಾನ್ಯಂ ವಿಪಶ್ಚಿದ್ವರೈಃ
ಮನ್ಯೋಃಸೂಕ್ತಮನುತ್ತಮೋಪನಿಷದಂ ನಾರಾಯಣೀಮಂಜಸಾ ।
ವ್ಯಾಚಖ್ಯಾವಥ ಕಾರಕಾರ್ಥವಿವೃತಿಂ ಚಕ್ರೇಽನ್ಯಗರ್ವಾಪಹಾಂ
ಶ್ರೀಮದ್ಧೀರಜನೇಂದ್ರತೀರ್ಥಯಮಿರಾಟ್ ದದ್ಯಾದ್ಧ್ರುವಂ ಮಂಗಲಮ್ ‖ 8 ‖

ಯೋ ನಿತ್ಯಂ ಪರಮಾದರೇಣ ಗುರುರಾಟ್ ಪಾದಾರವಿಂದಂ ಸ್ಮರನ್
ಭಕ್ತೇನಾಹಿಮಹೀಧರೇಂದ್ರನಿವಸ್ದೇವಾಭಿಧೇನೇರಿತಮ್ ।
ಸಂಧ್ಯಾಸು ಪ್ರಥಿತಂ ಪಠೇದ್ಯತಿಮಣೇಃ ಸನ್ಮಂಗಲಸ್ಯಾಷ್ಟಕಂ
ಪ್ರಾಪ್ನೋತ್ಯಾಯುರಮಂದಸಂಪದಮಥೋ ಸಜ್ ಜ್ಞಾನಪುತ್ರಾದಿಕಾನ್ ‖ 9 ‖

ಇತಿ ಶೇಷಾಚಲನಿವಾಸಿ ದೇವಾಚಾರ್ಯ ವಿರಚಿತಂ
ಶ್ರೀಮದ್ಧೀರೇಂದ್ರತೀಥಮಂಗಳಾಷ್ಟಕಂ ಸಂಪೂರ್ಣಮ್ ‖

# ಶ್ರೀ ಧೀರೇಂದ್ರಸ್ತುತಿಪಂಚಕಮ್

ಶ್ರೀಮತ್ಪೂರ್ಣಮತೇರಣುಕಥಾವ್ಯಾಖ್ಯಾ ಸುತುಷ್ಟೋ ಹರಿಃ ।
ಶ್ರೀಮನ್ಮಧ್ವಮತಾಧಿಪತ್ಯಮತನೋತ್ ವೆಂಕಣ್ಣಭಟ್ಟೇ ಮುದಾ ।
ಶ್ರೀಮತ್ಸದ್ಗುರುರಾಘವೇಂದ್ರನುತಿಸದ್ವ್ಯಾಖ್ಯಾಂ ಚ ದೃಷ್ಟ್ವಾ ಸ್ವಯಮ್
ಶ್ರೀಮದ್ವೇಂಕಟರಾಘವೇಂದ್ರ ಯುಗಲಾತ್ ಧೀರೇಂದ್ರತೀರ್ಥಃ ಕೃತಃ ॥ 1 ॥

ಧೀರ ಶ್ರೀರಾಘವೇಂದ್ರೇತ್ಯಖಿಲಗುರುನುತೌ ಸೂಚಿತಂ ಯಸ್ಯ ನಾಮ
ರಜ್ವಾ ಬದ್ಧೇವ ಮುಕ್ತೋ ಪ್ರಭುಣಜಕುಲಜೋ ರಾಮಶಾಸ್ತ್ರೀ ಚ ವಾದೇ ।
ಸಿಂಹಸ್ಯೇವಾಸ್ಯ ವಾಣೀ ಪ್ರಚನಚತುರಾ ಮನ್ಯುಸೂಕ್ತಾದಿಯುಕ್ತಾ
ಹಂಸಂ ನಿತ್ಯಂ ಸ್ತುವನ್ ಯೋ ವರದವರನದೀತೀರಗಸ್ತಂ ಭಜೇಽಹಮ್ ॥ 2 ॥

ನಾರಾಯನೋಪನಿಷದಾರ್ಷೇಯಸೂಕ್ತಿಸಹಿತೋಕ್ತ್ಯಾ ಚ ಯೇನ ವಿವೃತಾ
ಸೂಕ್ತಂ ಚ ಮನ್ಯುಶುಭಸೂಕ್ತಂ ನೃಸಿಂಹಪದಸೂಕ್ತೇಶ್ಚ ಯೇನ ವಿದುಷಾ ।
ವೇದಾಂತಸೂತ್ರಗತ ವ್ಯಾಸಾರ್ಯಹಾರ್ದಮನು ವೇದೋಕ್ತ ಯೋಽಪಿ ನಿಚಿತಾಃ
ಶಾಬ್ದೇ ಚ ಕಾರಕಗವಾದಂ ಪ್ರಕಾಶ್ಯ ಹರಿಸೇವಾ ಗುರೋ ವಿರಚಿತಾ ॥ 3 ॥

ವಾದೀಂದ್ರಪುತ್ರ ತವ ವೇದಾಂತತತ್ವರತಿರದ್ಯಾಪಿ ನೂನಮತುಲಾ
ವಯರಾಗ್ಯಭಕ್ತಿಗುರುಸೇವಾಗುಣೇಷು ವರದೇಂದ್ರೈಃ ಸ್ವಯಂ ಚ ವಿನುತ ।
ನಾಥೇ ಸದಾರತ ಜಗನ್ನಾಶ್ಚಕಾರ ಹರಿಲೀಲಾ ಸುಧಾಂ ಚ ಕೃಪಯಾ
ಏಕಾಂತತೀರವರ ದಾಸಂಶ್ರಯೇಣ ಗುರು ಶ್ರೀಕಾಂತಚಿಂತನಪರಃ ॥ 4 ॥

ಧೀರೇಂದ್ರತೀರ್ಥವರ ಧೀರಾರ್ತತಾಪರಹರ ಧೌರೇಯ ವಾದಸಮರೇ
ಧಾರೀವ ಯೋಗಿ ಗುರುರಾಜಸ್ಯ ಭೂರಿ ಕರುಣಾಸಾರವಾರಿ ಜಲಧೇಃ ।
ಧಾರೇವ ಭಕ್ತಜನ ಕಾರುಣ್ಯವಾಕ್ಯತತಿ ಪೀಯೂಷಸಾರಸರಿತಃ
ಆಧಾರಹೀನ ಗುರುರಸಂಸಾರಸಾಗರಸಮಗ್ನಂ ಸಮುದ್ಧರ ಗುರೋ ॥ 5 ॥

ಪಂಚಮುಖ್ಯಪಧಾಭಾಕ್ ಶ್ರೀರಾಘವೇಂದ್ರಾರ್ಯಪುತ್ರಕಃ ।
ಪಾರ್ಥಸಾರಥಿಶ್ಚಕ್ರೇ ಶ್ರೀಧೀರೇಂದ್ರಸುತಿಪಂಚಕಮ್ ॥ 6 ॥

* * * * * *

## ಶ್ರೀ ಧೀರೇಂದ್ರತೀರ್ಥರ ಮೇಲೆ ರಚಿಸಿದ ಹರಿದಾಸ ಕೀರ್ತನೆಗಳು

### 1

ಎಂದು ಕರುಣದಿಂದ ನೋಡುವಿ, ಧೀರೇಂದ್ರ ಗುರುವೆ ।
ಎಂದು ನಮಗಾನಂದ ನೀಡುವಿ ॥ ಪಲ್ಲವಿ ॥

ಎಂದು ಕರುಣದಿಂದ ನೋಡುವಿ
ನೊಂದು ಪಾಪದಿಂದ ಬಳಲಿ
ಬಂದು ನಿನ್ನ ಕಂದ ನೆಂ-
ತೆಂದು ಪಾದ ಪೊಂದಿದವನ ॥ ಅ. ಪ. ॥

ದೂರದಿಂದ ದಣಿದು ಬಂದೆನೊ, ಯತಿರಾಯ
ಚಾರು ಬೃಂದಾವನ ಕಂಡೆನೊ ।
ಭಾರಿ ಭಾರಿ ನೆರೆದು ಪರಿವಾರವನ್ನು ನೋಡಿ ಮನಸು
ಸೇರಿಸಿದೆನೊ ತೋಷದಿಂದ ನಿಮ್ಮ ಧೀರ ಚರಣದಲ್ಲಿ ॥ 1 ॥

ಅಷ್ಟಗಂಧ ತುಲಸಿ ಮಾಲೆಯ, ಶಾಂತಿನೆಲೆಯ
ಇಟ್ಟ ಅಕ್ಷತಾ ರಕ್ಷಣಾ ಸಿರಿಯ
ಶಿಷ್ಟ ಶಾಟಿ, ದಂಡಧಾರಿ, ಧೀರಸಿಂಹನಾದ ಗುರುವೆ
ಅಟ್ಟು ಎನ್ನ ಅಘದರಾಶಿ, ನಿಷ್ಠೆಯಿಂದ ಭಜಿಪೆ ನಿಮ್ಮ ॥ 2 ॥

ಶ್ರೇಷ್ಠ ನಿಮ್ಮ ಪಟ್ಟಣದೊಳು, ಯತಿರಾಯ ಕೇಳು
ಧಿಟ್ಟವರದೆ ಮೆಟ್ಟಿ ಹರಿದಳು
ಮುಟ್ಟು ಸ್ನಾನ ಮಾಡಿದ ಬಿಟ್ಟು ಹೋಗ್ವದು ಗ್ರಹ ಶ್ರೀಕೃಷ್ಣ
ವಿಠ್ಠಲನ್ನ ಭಜಿಪ ಯತಿವರೇಣ್ಯ ಎನ್ನ ॥ 3 ॥

## 2

ರಾಗ – ಪೂರ್ವಿ ತಾಳ – ಆದಿ

ಧೀರೇಂದ್ರಾ । ಧೀರೇಂದ್ರಾ ।
ಸಾರಿದ ಭಕುತರ । ನೀರಜಚಂದ್ರಾ ॥ ಪ ॥

ವರಹಜ ತಟಸ್ಥಿತ । ಗುರುವರೇಣ್ಯರ ।
ಹಿರಿಯ ಕರುಣವನು । ಧರಿಸಿ ಮೆರೆಯುವ ॥ 1 ॥

ಗುರು ವರದೇಂದ್ರರ । ಕರಸರಸಿಜನೆ ।
ವರದಾತೀರದಿ । ಇರುವ ಮುನೀಂದ್ರ ॥ 2 ॥

ಪಂಡಿತನೆಂಬುವ । ಡಂಭವು ತೊಗಲದೆ
ಡಿಂಬದಿ ಬಿಮಬನ । ಕಾಂಬುವದೆಂತೋ ॥ 3 ॥

ಭವಬಂಧನದಲಿ । ನವೆದೆನೊ ಬೇಯುತ
ತವಪಾದ ಸಾರಿದೆ । ಕವಿಜನಗೇಯ ॥ 4 ॥

ತುರು ಕರುವನು ತಾ । ಮರೆಯುವದುಚಿತವೆ
ವರದ ವಿಠ್ಠಲನ । ಸ್ಮರಣೆ ನಿರುತ ಕೊಡು ॥ 5 ॥



## 3

ರಾಗ – ರೇಗುಪ್ತಿ ತಾಳ – ಆದಿ

ವರದಾತೀರದಿ ಶೋಭಿಪ ಯತಿವರನ್ಯಾರೇ ನೋಡಮ್ಮಯ್ಯಾ ॥ ಪ ॥

ತ್ವರದಿ ಭಕುತರ ದುರಿತವತರಿದತಿ
ತ್ವರದಿ ಪಾಲಿಪ ಧೀರೇಮದ್ರ ಕಾಣಮ್ಮ ॥ ಅ. ಪ ॥

ಸುಂದರ ತಮವೃಂದಾವನ ಶುಭತರ
ಮಂದಿರ – ಗತಿನ್ಯಾರೇ ನೋಡಮ್ಮಯ್ಯಾ
ನಂದದಿ ಮಹಜನ ಸಂದಣಿ ಮಧ್ಯದಿ
ಚಂದಿರ ತೆರದಿಹನ್ಯಾರೇ ನೋಡಮ್ಮಯ್ಯಾ ॥
ಇಂದಿರಪತಿ – ಗುಣ – ವೃಂದವ ಭಜಿಸುತ
ನಂದದಿ ಶೋಭಿಪನ್ಯಾರೇ ಪೇಳಮ್ಮಯ್ಯಾ ।
ಅಂಧ ಬಧಿದರ ವೃಂದಗಳಿಷ್ಟವ
ನಿಂದು ನೀಡುವ ವಾದೀಂದ್ರರ ತನುಜ ॥ 1 ॥

ಮೂಢಮತಿಯನು ಓಡಿಸಿ ನಿಜರಿಗೆ
ಗಾಢ ಭಕುತಿಯನು ನೋಡಮ್ಮಯ್ಯಾ ।
ನೀಡುವ ಭಜಕರು ಮಾಡುವ ಸೇವೆಗೆ
ನೀಡುವ ವರಗಳನ್ಯಾರೇ ನೋಡಮ್ಮಯ್ಯಾ ॥
ಪಾಡುವ ದಾಸರು ಬೇಡುವ ಇಷ್ಟವ
ನೀಡುವದಿನ್ಯಾರೇ ಪೇಳಮ್ಮಯ್ಯಾ
ರೂಢಿಯೊಳಗೆ ಇಷ್ಟ ನೀಡುವ ವಿಷಯದಿ
ಜೋಡುಗಾಣೆನಾ ನೋಡಮ್ಮಯ್ಯಾ ॥ 2 ॥

ಭೂತಪೀಡೆ ಮಹ ಪ್ರೇತ ಪಿಶಾಚಿಯ
ವ್ರಾತಗಳು ಬಲು ನೋಡಮ್ಮಯ್ಯಾ

ಭೀತಿ ಬಡುತ ಮಹ ಆತುರದಲಿ ಈ
ಭೂತಳ ಬಿಡತಿಹವ್ರೋ ನೋಡಮ್ಮಯ್ಯಾ
ಯಾತುಧಾನಗಣ ಈತನ ನಾಮದ
ಭೀತಿಗೆ ಪ್ರೋಗುತಿಹದು ನೋಡಮ್ಮಯ್ಯಾ
ತಾತನ ತೆರದಲಿ ಈತನ ನಿಜಪದ
ದೂತರ ಪ್ರೊರವನು ನೋಡಮ್ಮಯ್ಯಾ
ದಾತಗುರು ಜಗನ್ನಾಥ ವಿಠಲಗೆ
ಪ್ರೀತಜನರೊಳತಿ ಪ್ರೀತನೀತಮ್ಮಾ ॥ 3 ॥



## 4

ರಾಗ – ಭೈರವಿ

ಧೀರೇಂದ್ರ ಗುರುವರ್ಯ ಸಂಸಾರಾಬ್ಧಿ ದಾಟಿಸಯ್ಯ
ಸೇರಿದವರಭಿಷ್ಟ ಪೂರೈಸುತಾ ವರದ ತೀರಾ ರಿತ್ತಿಯೊಳಿದ್ದು
ತೋರುವ ಮಹಿಮೆಯು ॥ ಪ ॥

ಕುಷ್ಠಾಭಗೇಂದ್ರಾಕ್ಷಯ, ಬಾಲಗ್ರಹ ದುಷ್ಟಾ ಪಿಶಾಚಿಭಯ
ಥಟ್ಟನೆ ಓಡಿಸಿ ಮುಟ್ಟಿ ಭಜಿಪರಿಗೆ ಇಷ್ಟಾರ್ಥಗಳ ಕೊಡುವ
ಶ್ರೇಷ್ಠಯತೀಂದ್ರ ಶ್ರೀ ॥ 1 ॥

ಯೋಗ್ಯತೆಗಳನರಿತು ಭಜಿಪರಿಗಾರೋಗ್ಯ ಭಾಗ್ಯವಿತ್ತು
ಭೋಗ್ಯಭೋಜನವಿತ್ತು ಮುಗ್ಗಿಸಿ ವಿಷಯದಿ ಹಿಗ್ಗುವಂದದಿಮಾಳ್ಪ
ಭಾಗ್ಯನಿಧೇಂದ್ರ ಶ್ರೀ ॥ 2 ॥

ವಸುಧೇಂದ್ರ ಕರಕಮಲ – ಭಯ ಪರಿಹರಿಸೋ
ಎನ್ನಯ ಶಮಲಾ । ವರದಾ ಶ್ರೀವಾಸನ್ನಕರುಣಾ
ನಿಧಿಯೊಳುಳ್ಳ । ಪರವಾದಿಗ್ಗಜಗಳ ತೋರಿದ
ಮೇಗೇಂದ್ರ ಶ್ರೀ ॥ 3 ॥



## 5

ರಾಗ – ಸುರಟಿ ತಾಳ – ಆದಿ

ಭೋಗುರು ಧೀರೇಂದ್ರ । ಶುಭಗುಣ । ವಾರಿಧಿ ಯೋಗಿಂದ್ರ ॥
ಭಾಗವತಾಗ್ರಣಿ ಗುರು ರಾಘವೇಂದ್ರರ ।
ರಾಗದಿ ಭಜಿಸುವ ಯೋಗಿಗಳರಸನೆ ॥ ಅನು ॥
ವೃತ್ತಿಮಂದಿರವಾಸಾ । ಭಜಕರಿ । ಗಿತ್ತು ಮನೋಲ್ಲಾಸಾ ।
ಹೊತ್ತು ಹೊತ್ತಿಗೆ ಶ್ರೀಶಾ । ನಂಘ್ರಿಯ । ಭಕ್ತಿಲವರ ಮನಸಾ ।
ಬಿತ್ತಿ ಬೆಳಸಿ ಭವಮುಕ್ತರ ಮಾಡಲು ।
ಅತ್ಯಂತ ಹರುಷದಿ ಯತಿವರನಾಗಿಹ ॥ 1 ॥
ಒಂದುದಿನದಿ ನಿಮ್ಮ । ನೆನೆದರೆ । ಬೆಂದವು ಭವಪಾಶ ॥
ಛಂದದಿಂದ ನಿಮಗೆ । ನಮಿಸಲು । ಮಂದಿನಘದ ನಾಶ ॥
ಇಂದಿರೆಯರಸ ಗೋವಿಂದನ ಕರುಣವ ।
ಇಂದು ಮುಂದೆ ಸದಾ ತಂದುಕೊಡುವೊ ಮುನಿ ॥ 2 ॥
ಧೀ ಎನ್ನೆ ಸ್ಥಿರ ಮನಸು । ಆಹೊದು । ಈರ ನಾಮಕನಲ್ಲಿ ॥
ಈರನೆನ್ನೆ ಪ್ರಾಣ । ರಾಯಗ । ಪಾರ ಸಂತಸವಹುದು ॥
ಇಂದ್ರನಾಮಗೆ ನಮೋ ಎನಲು ಉ ।
ಪೇಂದ್ರ ನಾಮಕ ತ್ರಿವಿಕ್ರಮನೊಲಿವನೋ ॥ 3 ॥
ಅನ್ವಯಾರ್ಥ ಉಳ್ಳ । ನಾಮದ । ಘನ್ನಮಹಿಮೆಯರಿಯೆ ॥
ಉನ್ನತ ರಯಿಪ್ರಾಣಾ । ದ್ಯರ । ಘನ್ನ ಪ್ರೇರಕ ಹರಿಯ ॥
ಚಿನ್ಮಯರೂಪವ ಚೆನ್ನಾಗಿ ನೆನೆಯುವ ।
ಸನ್ನುತ ಮಹಿಮ ಧೀರೇಂದ್ರ ಯತೀಂದ್ರಾ ॥ 4 ॥
ಗುರುವರ ವರದೇಂದ್ರ । ಯತಿವರ । ಕರಕಮಲ ಕಂಜ ॥
ಋಜುವರ ವಾದಿರಾಜ । ರಂಘ್ರಿ । ಸರಸಿಜಯುಗಭೃಂಗ ॥
ವರದ ಶ್ರೀಪ್ರಹಲ್ಲಾದ ಹರಿವಿಠ್ಠಲ ।
ನರ ಹರಿ ಶಿರಿಗೆನ್ನ ಶಿರವೆರಗಲಿ ಸದಾ ॥ 5 ॥

## 6

ರಾಗ – ಮೋಹನ ತಾಳ – ಆದಿ

ವೃಂದಾವನದಲಿ ಶೋಭಿಪ ಯತಿವರನ್ಯಾರೇ ಪೇಳಮ್ಮಯ್ಯ ॥ ಪ ॥
ಇಂದು ನಮ್ಮ ಅಘವೃಂದವ ಕಳೆವೊ
ಚಂದರಿವದನ ಧೀರೇಂದ್ರ ಕಾಣಮ್ಮಾ ॥ ಅನು ॥

ಬಾಲ ಚಂದಿರನಂತೆ ಪೋಲುವ ವಿಶಾಲ ಮುಖನಿವ ನ್ಯಾರೆ ಪೇಳಮ್ಮಾ ।
ಫಾಲದಲ್ಲಿ ಗಂಧಾಕ್ಷತೆ ಹೊಳೆವು ಅಂಗಾರ ತಿಲಕವಾ ನೋಡಮ್ಮಾ ।
ಆಲಲಾಟಗಂಭೀರಕೆ ಪೋಲುವ ಭ್ರೂವಿಲಾಸವ ನೋಡಮ್ಮಾ ॥
ಶ್ರೀಲಕುಮಿಯ ನಿಜಾಲಯದಂತೆ ವಿಶಾಲ ನಯನ ಪುಣ್ಯಶೀಲ ಕಾಣಮ್ಮಾ ॥ 1 ॥

ನಾಸ ಚಂಪಕ ಮಂದಹಾಸವದನ ಕೆಂದಾವರೆ ತುಟಿಯ ನೋಡಮ್ಮಾ ।
ಭಾಸಿಪ ಎಳೆನಗೆ ತೋರ್ಪುದು ದಂತಗಳೇಸು ಛಂದವುನೋಡಮ್ಮಾ ॥
ಆ ಸುಕೂರ್ಮನಂತೆ ಪೋಲ್ವಕಪೋಲದ ರಾಸಿ ಬೆಳಕಾ ನೋಡಮ್ಮಾ ॥
ಮೀಸಲು ಕಂಠ ಜಿಹ್ವಾಗ್ರಗಳಿಮದಲಿ ರಾಶಿ ವೇದವ ತಾ ಘೋಷಿಪನಮ್ಮಾ ॥ 2 ॥

ಚೆಲುವ ವಕ್ಷದಲ್ಲಿ ಥಳಥಳಿಸುವ ದಿವ್ಯ । ತುಳಸಿಯಸರವ ನೋಡಮ್ಮಾ ।
ಭಳಿಭಳಿರೆಆಹ ದ್ವಾದಶನಾಮದ । ಬಲುಸೊಬ ನೋಡಮ್ಮಾ ॥
ಕಮಲಾಕ್ಷ ಹರಿಯ ಆವಾಸದಂತೊಪ್ಪುವ । ತನು ಲತೆಯಾ ನೋಡಮ್ಮಾ ॥
ಹಲವು ಕಾಲದಲಿ ಸೇವಿಪಜನರನು । ಸಲಹುವ ಚರಣಕಮಲ ಕಾಣಮ್ಮಾ ॥ 3 ॥

ಇವನು ಪೇಳೆ ಗುರು ರಾಘವೇಂದ್ರರು ಒಲಿವರು ನಿಜವಿದು ಕೇಳಮ್ಮಯ್ಯಾ ॥
ಜವನ ಜಂಗುಳಿ ಭವಯಾತನೆಗಳು ಖವಖವಿಸುವಲೋಡುವವಮ್ಮಾ ॥
ಪವನಮತಾನುಗರಿವನಾಶ್ರಯಿಸಲು ಪವನಪಿತನ ತಾ ತೋರಿಪನಮ್ಮಾ ॥
ಸುವಸನದಂಡ ಕಾಷಾಯ ಧರಿಸಿಹ ನವ ಸುಂದರ ಯತೀಶ ಕಾಣಮ್ಮಾ ॥
ಕರುಣಿ ತನ್ನ ದಿವ್ಯ ವೃಂದಾವನವನು । ಮೆರೆಮೆರೆವುತ ತೋರಿದನಮ್ಮಾ ॥



## 7

ಧೀರೇಂದ್ರರನು ನಂಬಿರೋ ಸಜ್ಜನರೆಲ್ಲಾ ॥ ಪ ॥

ಮಾರುತ ಮತದಲ್ಲಿ ವೀರರೆಂದೆನಿಸಿದ ।
ಮಾರಪಿತನಂಘ್ರೀ ಕಮಲವ ಭಜಿಸುವ ॥ ಅ ॥

ವರದೇಂದ್ರ ತರಜರ ವರದಾ ತೀರಸ್ಥರ ।
ನಿರತವು ಸೇವಿಸೆ ಪರಮ ಪದವಿಯ ನೀವ ॥ 1 ॥

ಪುರುಷಸೂಕ್ತ ಅತಿ ಸುಲಭ ಭಾಷ್ಯವ ಗೈದ ।
ಪುರುಷಸಿಂಹನಾಮ ಹರಿಗೆ ಅರ್ಪಿಸಿದ ॥ 2 ॥

ವರ ಭಾಷ್ಯ ಮೊದಲಾದ ಸದ್ಗ್ರಂಥಗಳನ್ನೆಲ್ಲಾ ।
ನೆರೆ ಪೇಳ್ವೆ ವರಗುರು ಶಾಮಸುಂದರ ಪ್ರಿಯ ॥ 3 ॥



## 8

ಆರತಿ ಎತ್ತಿರೆ ನಮ್ಮ ಧೀರೇಂದ್ರ ರಾಯರಿಗೆ ।
ಆರತಿ ಎತ್ತಿರೆ ನಮ್ಮ ಧೀರ ಮುನಿಗಳಿಗೆ ॥ ಪಲ್ಲವಿ ॥

ಆರತಿ ಎತ್ತಿರೆ ರಾಘವೇಂದ್ರರ ಅಂಘ್ರಿ ಭಜಿಪರಿಗೆ ।
ಆರತಿ ಎತ್ತಿರೆ ವಾದೀಂದ್ರ ತನುಜರಿಗೆ ।
ಆರತಿ ಎತ್ತಿರೆ ವರದೇಂದ್ರರ ಕರ ಸಂಜಾತರಿಗೆ ।
ಆರತಿ ಎತ್ತಿರೆ ಧೀರೇಂದ್ರ ರಾಯರಿಗೆ ॥ 1 ॥ ಆರತಿ ಎತ್ತಿರೆ ॥

ಪೂರ್ಣಪ್ರಜ್ಞರ ವಿಷಯಗಳನು ಚೆನ್ನಾಗಿ ಬಲ್ಲಪ್ಪ ।
ನಾನಾ ಸೂಕ್ತಗಳನು ಬಿಡಿಸಿ ಹೇಳಿಪ್ಪ । ಧಾ-
ರುಣಿಯೊಳು ಮಹಾಜ್ಞಾನಿ ಎನಿಸಿಕೊಂಬಪ್ಪ ।
ಹನುಮನೊಡೆಯನ ಪಾದ ತೋರಿಸಪ್ಪ ॥ 2 ॥ ಆರತಿ ಎತ್ತಿರೆ ॥

ಆರತಿ ಎತ್ತಿರೆ ವಿರಕ್ತ ಪುರುಷರಿಗೆ ।
ಆರತಿ ಎತ್ತಿರೆ ಶುದ್ಧ ಭಾಗವತ ಹರಿದಾಸ ಪ್ರಿಯರಿಗೆ ।
ಆರತಿ ಎತ್ತಿರೆ ಭುವನೇಂದ್ರ ವಂದ್ಯರಿಗೆ ।
ಆರತಿ ಎತ್ತಿರೆ ವೇದ ವಿಠಲ ಪ್ರಿಯರಿಗೆ ॥ 3 ॥ ಆರತಿ ಎತ್ತಿರೆ ॥

ವರದಾ ತಟದಲ್ಲಿ ವಾಸವಾಗಿಪ್ಪ, ಬೇಡಿದ ।
ವರಗಳನು ಕೊಡುವನಪ್ಪ ನಮ್ಮಪ್ಪ ।
ದುರಿತವನ ಓಡಿಸಿ ದುಃಖವ ಕಳೆದು ।
ಶರಣಾಗತರ ಪೊರೆಯೋ ನಮ್ಮಪ್ಪ ॥ 4 ॥ ಆರತಿ ಎತ್ತಿರೆ ॥

ಆರತಿ ಎತ್ತಿರೆ ನಮ್ಮ ಧೀರೇಂದ್ರ ರಾಯರಿಗೆ
ಆರತಿ ಎತ್ತಿರೆ ನಮ್ಮ ಧೀರ ಮುನಿಗಳಿಗೆ ॥ ಪಲ್ಲವಿ ॥

◆ ◆ ◆ ◆

## 9

ಏಳು ಧೀರೇಂದ್ರ ಮುನಿಗಣ ಸ್ತೋಮ
ಸುಪ್ರಭಾತವು ನಿಮಗೆ ಭುವನೇಂದ್ರ ಮುನಿ ವಂದ್ಯ ॥ ಪಲ್ಲವಿ ॥

ಸುಪ್ರಭಾತವು ನಿಮಗೆ ಏಳು ಶ್ರೀ ರಾಘವೇಂದ್ರ ಕೃಪಾ ಪಾಂಗ ।
ಸುಪ್ರಭಾತವು ನಿಮಗೆ ಏಳು ಶ್ರೀ ವಾದೀಂದ್ರ ಪುತ್ರ ।
ಸುಪ್ರಭಾತವು ನಿಮಗೆ ಏಳು ಶ್ರೀ ವರದೇಂದ್ರರ ಕರಸಂಜಾತ ।
ಸುಪ್ರಭಾತವು ನಿಮಗೆ ಏಳು ಶ್ರೀ ಧೀರೇಂದ್ರ ಗುರವರ್ಯ ॥ 1 ॥

ಏಳು ಜನಗ್ಮೋಹನವಿಲಾಸ ಭಕ್ತ, ಸುಪ್ರಭಾತವು ನಿಮಗೆ ।
ಏಳು ಮರುತ ಮತ ಪ್ರಚಾರಕ, ಸುಪ್ರಭಾತವು ನಿಮಗೆ ।
ಏಳು ಮಹಿಸುರವಂದ್ಯ, ಸುಪ್ರಭಾತವು ನಿಮಗೆ ।
ಏಳು ಧೀರ ಯೋಗಿವರ ಚಂದ್ರ, ಸುಪ್ರಭಾತವು ನಿಮಗೆ ॥ 2 ॥

ವಾತಣ್ಣನೊಡೆಯನಿಗೆ ಸುಪ್ರಭಾತ ಪಾಡಲು ಬೇಕು ।
ಸೀತಾರಾಮರ ಪೂಜೆ ಮಾಡಲು ಬೇಕು ।
ಪೂತಾತ್ಮ ಸಾಲಿಗ್ರಾಮಗಳ ಅಭಿಷೇಕ ಮಾಡಲು ಬೇಕು ।
ಸಂತಾನ ಗೋಪಾಲನಿಗೆ ಗಾನ ಪಾಡಬೇಕೆಂತೆ ॥ 3 ॥

ಆಚಾರ್ಯ ಮಧ್ವರ ಸಿದ್ಧಾಂತದ ಸಾರಲು ಬೇಕು ।
ಅಚ್ಚ್ಯುತನ ವರ್ಣಿಪ ಸೂಕ್ತಗಳ ಸಾರ ಪೇಳಲು ಬೇಕು ।
ಕುಚೇಲ ಮಿತ್ರನ ಕಥೆಗಳ ಪೇಳಲು ಬೇಕು ।
ನೀಚ ಮತಗಳ ಖಂಡಿಸಲು ಬೇಕು ॥ 4 ॥

ನೊಂದ ಭಕುತರ ಸಲಹಲು ಬೇಕು ।
ಮಂದಮತಿಯರನು ಪಂಡಿತರಾಗಿ ಮಾಡಲು ಬೇಕು ।
ಮೋದ ಭಾಗವತರೊಡನೆ ಆಟವಾಡಲು ಬೇಕು ।
ವೇದ ವಿಠಲನ ಪಾದವ ತೋರಿಸಲು ಬೇಕು ॥ 5 ॥

ಏಳು ಧೀರೇಂದ್ರ ಮುನಿಗಣ ಸ್ತೋಮ
ಸುಪ್ರಭಾತವು ನಿಮಗೆ ಭುವನೇಂದ್ರ ಮುನಿ ವಂದ್ಯ

## ಶ್ರೀ ಧೀರೇಂದ್ರತೀರ್ಥರ ಮಂಗಳ ಚರಿತ್ರೆ

ಗುರು ಕರುಣದಿಂದ ಪೇಳುವೆನು ರಿತ್ತಿ ನಿವಾಸ
ಧೀರಸಿಂಹ ಶ್ರೀ ಧೀರೇಂದ್ರ ತೀರ್ಥರ ಚರಿತೆಯಾ ॥ ಪಲ್ಲವಿ ॥

ಅನಾದಿ ನಿತ್ಯ ಅಪ್ರಾಕೃತ ಶರೀರ ಉಳ್ಳ
ಅನಂತ ವೇದ ಪ್ರತಿಪಾದ್ಯ ಅಕ್ಷಯ ಪುರುಷ
ಅನಿಲ, ಅಜ, ರಮಾ ವಂದಿತ
ಆನಂದಮಯ ನಾರಾಯಣನಿಗೆ ನತಿಸುವೆನು ॥ 1 ॥

ಗರುಡ ಶೇಷ ಶರ್ವಾದಿ ವಂದಿತ
ಸುರ ಗುರು 'ಮಾತರಿಶ್ವನ್'
ಸರುವ ಪ್ರಾಣಿಗಳಿಗೆಲ್ಲಾ ಪ್ರಾಣ
ಗುರು ಮುಖ್ಯಪ್ರಾಣನಿಗೊಂದಿಸುವೆ ಭಕ್ತಿಯಿಲಿ ॥ 2 ॥

'ಸುಧಾ' ಎಂಬ ಅಮೃತದಲ್ಲಿ 'ಪರಿಮಳ'ವೆಂಬ
ಚಂದನವ ಬೆರೆಸಿ ವಿಚಕ್ಷಣರಿಗುಣಿಸಿದ
ಉದ್ದಾಮ ದಕ್ಷ ದೊರೆ ಕಲಿಯುಗುದ
ಸದ್ವಿನುತ ಕಲ್ಪದ್ರುಮ ಶ್ರೀರಾಘವೇಂದ್ರರಾಯರಿಗೆ ಆ ನಮಿಪೆ ॥ 3 ॥

ಶ್ರೀ ಉಪೇಂದ್ರ ತೀರ್ಥರ ಕರಸಂಜಾತ
ರಿಪುಂಜಯ ರಾಘವೇಂದ್ರರಾಂಘ್ರೀ ಭಜಿಪ
ತಾಪಸ ಶ್ರೇಷ್ಠ ವಾದಿಗಳಲಿ ಮೆರೆವ
ಕೃಪಾಳು ಶ್ರೀವಾದೀಂದ್ರ ತೀರ್ಥರಿಗೆ ನಮಿಪೆ ॥ 4 ॥

ಶ್ರೀ ವಸುಧೇಂದ್ರರ ಕರ ಸಂಜಾತ
ವಸುಧೆಯೊಳು ವಿಖ್ಯಾತ ಧೀರೇಂದ್ರರಾಶ್ರಮದಾತ, ಹರಿ
ದಾಸ ಶ್ರೇಷ್ಠ ಪ್ರಾಣೇಶರಿಗೊಲಿದ
ಸುಶೀಲ ಶ್ರೀ ವರದೇಂದ್ರ ಗುರುಗಳಿಗೆ ಆ ನಮಿಪೆ ॥ 5 ॥

ದುರ್ಮತಗಳೆಂಬ ಮಹಾರಣ್ಯದಲ್ಲಿ, ಮ
ಧ್ವಮತವೆಂಬ ಖಡ್ಗವನೆ ಪಿಡಿದು
ಭೌಮದಿಂದ ಯತೇಚ್ಛವಾಗಿ ವಿಹಾರಿಸುವ
ಯಮಿವರ ಶ್ರೀ ಧೀರೇಂದ್ರ ತೀರ್ಥರಿಗೆ ಆ ನಮಿಪೆ ॥ 6 ॥

ಇವರ ಚರಿತೆ ಪೇಳಲು ನಾನು ಸಣ್ಣವನು
ಲವಲೇಶ ನಾನರಿಯೆ, ವಿಬುಧರಿಗೆ ಮಾತ್ರ ನಿಲು–
ಕುವರಿವರು, ಎನ್ನ ಸಾಹಸ ಹಾಸ್ಯಸ್ಪದವಾದೀತು, ಇರಲಿ
ಇವರ ಕರುಣೆ ಬಲದಿಂದ ಕಿಂಚಿತ್ತು ಪೇಳುವೆನು ॥ 7 ॥

ಪೂರ್ವದಲಿ ಶ್ರೀ ಧೀರೇಂದ್ರರು ಜಯರಾಮಾಚಾರ್ಯರು
ದಿವ್ಯ ಶ್ರೀ ರಾಘವೇಂದ್ರರ ವಂಶದ ಕುಡಿ ಇವರು
ಭವ್ಯ ಗುರುಗುಣಸ್ತೋತ್ರ ರಾಯರಿಗೊಪ್ಪಿಸಿ ಒಪ್ಪುಗೆ ಪಡೆದ
ಸವರ್ಯ ಶ್ರೀ ವಾದೀಂದ್ರರ ಪೂರ್ವಾಶ್ರಮದ ಸುಪುತ್ರರಿವರು ॥ 8 ॥

ಬಾಲ್ಯದಲಿ ಜನಕನಿಂದ ಪಾಠ ಕೇಳಿದ ಭಾಗ್ಯ ಇವರದು
ಜಲಜನಾಭನ ಚರಿತೆ, ವೇದಶಾಸ್ತ್ರ, ತರ್ಕ, ನಾಟ–
ಕಾಲಂಕಾರದಿ ಪ್ರವೀಣರು, ದುರ್ಮತ ಖಂಡಿಪರು
ಅಲವಭೋಧರ ಮತವೇ ಉಸಿರು ॥ 9 ॥

ಸಕಾಲದಲಿ ಕಂಕಣ ಬಲ ಕೂಡಿ ಬಂತು
ವ್ಯಾಕುಲ ಕಳೆಯುವ ತ್ರಯ ಸುಪುತ್ರರು
ಸುಖವನೀಯವ ಪುತ್ರಿ ಕೃಷ್ಣಮ್ಮ
ನಿಕೇತನದ ತುಂಬ ಮೋದವನಿತ್ತ ಮಾರಮಣನು ॥ 10 ॥

ಪುತ್ರರೆನ್ನಲ್ಲಾ ದಿಗ್ಧಂತಿ ವಾದಿಗಳನ್ನಾಗಿ ಮಾಡಿದರು
ಪುತ್ರಿಯನ್ನು ರಾಜಗೋಪಾಲಾಚಾರ್ಯರೆಂಬ, ವಿ-
ಪ್ರೋತ್ತಮರಿಗೆ ಕೊಟ್ಟು ವಿವಾಹ ಮಾಡಿದರು
ನಂತರ ರಾಜಗೋಪಾಲಾಚಾರ್ಯರೇ ಸುಜನೇಂದ್ರ ತೀರ್ಥರಾದರು
॥ 11 ॥

ಮನಸು ಸತತ 'ನಿಜ ವೈರಾಗ್ಯ ತಾಳ ಬೇಕೆ'ನ್ನುವ
ಜನಕ ವಾದೀಂದ್ರರ ಮಾತು ಸದಾ ಕಾಡುತ್ತಲಿತ್ತು
ಜನಕನ ಬೋಧನೆ ಇವರ ಪಾಲಿಗೆ ಹರಿಯಾಜ್ಞೆ
ಜನುಮ ಸಾರ್ಥಕ ಮಾಡುವದಕೆ ಕಾಯುತ್ತಲಿದ್ದರು ॥ 12 ॥

ಹೊತ್ತು ಮಾತ್ರ ಗೊತ್ತಿಲ್ಲದೇ ಹೋಗುತ್ತಿತ್ತು
ಮತ್ತೆ ಮತ್ತೆ ಸನ್ಯಾಸಾಶ್ರಮ ಕೈ ಬೀಸು
ತ್ತಿತ್ತು, ಮನುಜ ಬಯಸಿದರೇನು ಫಲ
ಕಂತುಪಿತ ತಾನೊಲಿಯಲಿಲ್ಲವೆಂದರೆ? ॥ 13 ॥

ಹರಿ ಭಕುತಿ ಸ್ಥಿರವಾಗಿ ನಿಲ್ಲದು
ಹರಿ ಒಲುಮೆ ಆಗುವತನಕ ಬೀಜ ಮೊಳಕೆ ಒಡೆಯಲಾರದು
ಹರಿ ಹರಿ ಎನ್ನುತ ಪಾಪಗಳನು ಹರಿಯುತ್ತಲಿರಬೇಕು
ಹರಿ ಕರುಣೆ ಪಡೆದವನೇ ಧನ್ಯ ಈ ಜಗದೊಳು ॥ 14 ॥

ಹರಿಯ ಪಾದ ಕಾಣಬೇಕೆನುವ ಮನುಜನೇ ಮಾನ್ಯ
ಹರಿಯ ಕೃಪೆಗೆ ಪಾತ್ರನಾಗಬೇಕೆಂಬುದೆ ಘನ
ಹರಿಯ ಭಕ್ತರ ಜೊತೆ ಒಡನಾಡದವನೇ ಶೂನ್ಯ
ಹರಿಯ ಮನೆಗೆ 'ನಾ' ಹೋಗುವದಾದರೆ ಹೋದೇನು ॥ 15 ॥

ಹರಿಯ ಅಗಣಿತ ಗುಣಗಳ ತಿಳಿಸುವ ವಿಜ್ಞಾನ - ಜ್ಞಾನ ಪಥ
ಹರಿ ತಾ ನೊಲಿವ ಮನವನಿತ್ತರೆ - ಭಕ್ತಿ ಪಥ
ಹರಿ ಇಚ್ಛೆಗೆ ಬದ್ಧನಾಗಿ ಬದುಕುವಾಸೆ - ವಿರಕ್ತಿ ಪಥ
ಹರಿ ಕೊಟ್ಟ ಮತಿಯಿಂದ ತತ್ತ್ವ ಸಾಕ್ಷಾತ್ಕಾರ - ಮೋಕ್ಷ ಪಥ ॥ 16 ॥

ದುರ್ಮತಗಳೆಲ್ಲ ಮತ್ತೆ ತಲೆ ಎತ್ತಿ ನಿಲುವತಿರಲು
ರಮಾರಮಣನಿಗೆ ಪೂರ್ಣಬೋಧರ ಮತ ಸಂಪೂರ್ಣವೆಂದು
ಭೂಮಿಯೊಳು ಸಿದ್ಧ ಮಾಡುತಲಿರೆ
ನೇಮದಿ ಹರಿ ಭಕುತರು ಕಾಲ ಕಾಲಕ್ಕೆ ॥ 17 ॥

ಜಯರಾಮಾಚಾರ್ಯರು ದುರ್ವಿಷಯ ದುರ್ಮತ
ಮಾಯಾವಾದಗಳ ಖಂಡನೆ ಮಾಡುತ ಮಧ್ವ ಮತದ
ಜಯ ಪತಾಕೆಯನು ಬಾನಲಿ ಹಾರಿಸುತ
ತೋಯಜಾಕ್ಷ ಹರಿ ಸರುವೋತ್ತಮನೆನುತ ॥ 18 ॥

ಇತ್ತ ಶ್ರೀ ವಾದೀಂದ್ರರಿಗೆ ದೇಹಾಲಸ್ಯವಾಗಲು
ಈತ ಪೂರ್ವಾಶ್ರಮ ಅನುಜ ವೇಣುಗೋಪಾಲಾಚಾರ್ಯರ ಹಿರಿಯ
ಸುತ ಪುರುಷೋತ್ತಮಾಚಾರ್ಯರಿಗೆ ಆಶ್ರಮವಿತ್ತರು
ಕಂತುಪಿತನ ಪ್ರೇರಣೆಯಂತೆ ॥ 19 ॥

ಶ್ರೀ ಮಠದ ಮಹಾಸಂಸ್ಥಾನವನ್ನಿತ್ತು
ನೇಮಿಸಿದರು ಆಶೀರ್ವಾದ ಮಾಡಿ
ಶ್ರೀಮಠಕ್ಕೆ,ಪುರುಷೋತ್ತಮಾಚಾರ್ಯರಾದರು
ಶ್ರೀ ವಸುಧೇಂದ್ರ ತೀರ್ಥರು ॥ 20 ॥

ಮುಂದೆ ಶ್ರೀವಾದೀಂದ್ರರು ಪ್ರ-
ಮೋದಿನಿ ಸಂವತ್ಸರ ನವಮಿ ದಿನ ಜೇಷ್ಠ
ಶುದ್ಧ, ವೆಂಕಣ್ಣ ನಿರ್ಮಿಸಿದ ಬೃಂದಾವನ ಪ್ರವೇಶ ಮಾ-
ಡಿದರು, ವಸುಧೇಂದ್ರರು ಚರಮ ಪಾಡಿದರು ॥ 21 ॥

ವಂದಾರು ಸನ್ನಿಭ ವಿದ್ವಜ್ಜನರ ಪ್ರೀತಿ ಪಾತ್ರ
ವೇದಾಂತ ದೇಶಿಕ ವಿಶ್ವಮಾನ್ಯ ಶ್ರೀರಾಘ-
ವೇಂದ್ರರ ಕರುಣೆಗೆ ಪಾತ್ರ ಶ್ರೀ -
ವಾದೀಂದ್ರರಿಗೆ ನಮಿಸುವೆನು ಸದಾ ॥ 22 ॥

ಇತ್ತ ಜಯರಾಮಾಚಾರ್ಯರಿಗೆ
ಪಿತನ ಅಗಲುವಿಕೆ ಬಲು ತಾಪ ನೀಡಲು
ಪುಟ್ಟಿತು ಸಂಸಾರದಲಿ ವಿರಕ್ತಿ, ಗುರುಗಳೇ
ಗತಿಯೆಂದ ಶರಣು ಹೋದರು ॥ 23 ॥

ನಿತ್ಯ ಹಯವದನನ ಸಾಕ್ಷಿ ಸಮ್ಮತ
ನಿತ್ಯ ಪೇಳುವ ಅಪ್ಪಣ್ಣಾಚಾರ ಕೃತ
ಸತ್ಯ ಶ್ರೀರಾಘವೇಂದ್ರ ಸ್ತೋತ್ರಕ್ಕೆ ವ್ಯಾಖ್ಯಾನ
ಕೃತಿ ರಚಿಸಿ ಸಮರ್ಪಿಸಿದರು ಮಹಾಗುರುವಿಗೆ ॥ 24 ॥

ದಕ್ಷಿಣ ಭಾರತ ಯಾತ್ರೈದರು ಅ-
ನೇಕ ವಾದಿಗಳನು ಗೆದ್ದರು, ದ್ವೈತ ಮತವೇ
ಮೋಕ್ಷ ತಾರಕವೆಂದರು, ಪಂಚಭೇದ ಸ್ಪ-
ಷ್ಟೀಕರಣ ಮಾಡಿದರು ತಾರತಮ್ಯ ಪೇಳಿದರು ॥ 25 ॥

ಪರಾವರೇಶ ಪರಮಾತ್ಮನಿಗೆ ನಮಸ್ಕಾರ
ಪರಂಜ್ಯೋತಿ ಪರಮಾತ್ಮನಿಗೆ ನಮಸ್ಕಾರ
ಪುರಾಣ ಪುರುಷ ಪರಮಾತ್ಮನಿಗೆ ನಮಸ್ಕಾರ
ಪರಿಪೂರ್ಣ ಪರಮಾತ್ಮನಿಗೆ ನಮಸ್ಕಾರ ॥ 26 ॥

ಭಾವಾದ್ವೈತ ಕ್ರಿಯಾದ್ವೈತ ದ್ರವ್ಯಾದ್ವೈತ
ಭಾವನೆಗಳನ್ನು ಜ್ಞಾನಿಯು ಪೊಂದಿ ಆವಿರ್ಭೂತ
ಭಾವ ಸ್ವರೂಪ ಜ್ಞಾನಾನಂದನಾಗಿ ಜಾಗೃತಾದಿ ಅವಸ್ಥೆ
ದಾಟಿ ಸುಖಪೊಂದ ಬೇಕು ॥ 27 ॥

ಶರೀರವೇ ರಥ, ಇಂದ್ರಿಯಗಳು
ತುರಗಗಳು, ಮನಸ್ಸೇ ಕಡಿವಾಣ, ವಿಷಯಗಳು
ದಾರಿಯು ಬುದ್ಧಿಯೇ ಜೀವನ
ಸಾರಥಿ ಚಿತ್ತವೇ ಈಶನು, ಜೀವನು ರಥಿಕನು ॥ 28 ॥

ಹತ್ತು ಪ್ರಾಣಿಗಳೇ ರಥದ ಅಚ್ಚು
ಸತ್ಯ ಧರ್ಮ ಅಧರ್ಮಗಳೇ ಚಕ್ರಗಳು
ಉತ್ತಮ ಪ್ರಣವ ಮಂತ್ರವೇ ಬಿಲ್ಲು ಜ್ಞಾನಮಯ
ಚಿತ್ತವೇ ಬಾಣ ಎನಿಸುವದು ॥ 29 ॥

ರಾಗ ದ್ವೇಷ ಲೋಭ ಶೋಕ ಮೋಹ ಭಯ ಮದಾದಿಗಳು
ಬೇಗ ಗೆಲ್ಲಬೇಕಾದ ವೈರಿಗಳು, ಜೀವನದ
ನಿಗದಿತ ಗುರಿಯೇ ಮುಖ್ಯಪ್ರಾಣನೊಡೆಯ
ಸ್ವಗತಬೇಧ ವಿವರ್ಜಿತ ಪರಬ್ರಹ್ಮನನು ಕಾಣುವದು ॥ 30 ॥

ಅನಾದಿಕಾಲದಿಂದ ಅಜ್ಞಾನ ಹೊತ್ತಿರುವ ಜೀವನು
ತಾನು ಸ್ವತಂತ್ರನೆಂದು ಅರಿತು ಭ್ರಾಂತನಾಗಿರುವನು
ಹೀನ ಮಿಥ್ಯಾ ಜ್ಞಾನವು ತಮಸಿಗೆ ಕಾರಣ, ಯಥಾರ್ಥ
ಜ್ಞಾನವೇ ಮುಕ್ತಿಗೆ ಸೋಪಾನ ॥ 31 ॥

ಸಿರಿ, ವಿರಿಂಚಿ, ಸಮೀರ, ವಾಣೀ, ಭಾರತಿ
ಗರುಡ, ಶೇಷ, ಶುಕ, ಶಕ್ರಾದಿ
ಸುರರೆಲ್ಲ ಶ್ರೀ ಹರಿಯಾಧೀನರು
ಸಿರಿಯು ನಿತ್ಯ ಮುಕ್ತಳು ॥ 32 ॥

ನಿತ್ಯ ತಪ ಇಂದ್ರಿಯ ನಿಗ್ರಹ
ನಿತ್ಯ ಸ್ವಧರ್ಮಾಚರಣೆ ಬ್ರಹ್ಮಜ್ಞಾನ ಸ್ಥಿರವಾಗಿಸುವದು
ಉತ್ತಮ ಮುಕ್ತಾಮುಕ್ತ ಜೀವರಿಗೆಲ್ಲ
ನಿತ್ಯಶಕ್ತಿ ಸಂಪನ್ನ ಪರಮಾತ್ಮನು ನಿಯಾಮಕನು ॥ 33 ॥

ಜಗಕೆಲ್ಲ ಬೆಳಕನ್ನುಂಟು ಮಾಡುತಾವರಿಸುವ ಆರ್ಕನಂತೆ,
ಭಗವಂತನು ವಾಸುದೇವರೂಪಿಯಾಗಿ ಆವರಿಸಿರಿವನು
ಜಗವೆಲ್ಲ, ಜಗತ್ಪ್ರತ್ಯಕ್ಷನಾದ ರವಿಗೆ ರವಿ-
ಯಾಗಿ ಪ್ರಜ್ವಲಿಸುವನು ॥ 34 ॥

ಮುಂತಾದ ಪ್ರಮೇಯಗಳನು ಪೇಳಿ
ಪ್ರತಿವಾದಿಗಳ ಪೂರ್ವಪಕ್ಷಗಳನು ಗೆದ್ದು
ದ್ವೈತ ಪತಾಕೆ ಗಗನದಲಿ ಹಾರಿಸಿ ದಶಪ್ರ-
ಮತಿಯನು ಕೊಂಡಾಡಿದರು ಆಚಾರ್ಯರು ॥ 35 ॥

ಇತ್ತ ವಸುಧೇಂದ್ರ ತೀರ್ಥರು ಸಂಚರಿ-
ಸುತ, ತುಂಗಭದ್ರಾ ನದೀ ತೀರ ಕೆಂಚನಗುಡ್ಡ
ಹತ್ತಿರ ತಲುಪಲು ದೇಹ ಆಯಾಸಗೊಂ-
ಡಿತು ಆಶ್ರಮ ಕೊಡುವ ಕಾಲ ಬಂದಿತು ॥ 36 ॥

ಬಲರಾಮಾಚಾರ್ಯರು ವಸುಧೇಂದ್ರರ ಪೂರ್ವಾಶ್ರಮ ಅನುಜರು
ಲೀಲೆ ಶಾರದಾ ದೇವಿ ಅನುಗ್ರಹ ಪಾತ್ರರು
ಹಲಧರಾನುಜನ ಭಕುತರು, ವೇದ ಕೋವಿದರು
ಶೀಲ ಗುಣನಿಧಿಗಳಿಗೆ ಆಶ್ರಮ ಕೊಟ್ಟರು ॥ 37 ॥

ಬಲರಾಮಾಚಾರ್ಯರು ಶ್ರೀವರದೇಂದ್ರ ತೀರ್ಥರಾದರು
ಅಲಂಕರಿಸಿದರು ಸಂಸ್ಥಾನವ
ಪಾಲಸಾಗರೊಡೆಯನ ಕೃಪೆ ಆಯ್ತು ಧನ್ಯ ಧನ್ಯ ಎನುತ
ಜಲಜನಾಭನಿಗೆ ಪುನಃ ಪುನಃ ನಮಸ್ಕರಿಸಿದರು ॥ 38 ॥

ಮುಂದೆ ಶ್ರೀ ವಸುಧೇಂದ್ರರಿಗೆ ದೇಹಾಲಸ್ಯವಾಗಲು
ಮಾಧವನಪುರಕೆ ಯಾತ್ರೈದರು
ನೊಂದರು ವರದೇಂದ್ರರು, ಗುರುಗಳ ಅಗಲುವಿಕೆಗೆ
ಪಾಡಿದರು ಚರಮ ಶ್ಲೋಕವನು ॥ 39 ॥

ವಸುಧೆಯೊಳ್ ವಿಖ್ಯಾತ ವೈರಾಗ್ಯಾದಿ ಗುಣ
ಸುಸಂಪನ್ನ, ವೇದ ವೇದಾಂಗ ಚತುರ ಶ್ರೀ
ವಸುಧೇಂದ್ರ ಮುನಿ ಶ್ರೇಷ್ಠರಿಗೆ ನ-
ಮಿಸುವೆನು ನಾನೆಂದು ಕೊಂಡಾಡಿದರು ॥ 40 ॥

'ಸಪ್ತಮೋ ಮತ್ಸಮೋऽ ಯತಿಃ ವರದೇಂದ್ರೋ ಭವಿಷ್ಯತಿ'
ಆಪ್ತ ಶ್ರೀ ಮಂತ್ರಾಲಯ ಪ್ರಭುಗಳ ವಾಣಿ, ಇಕೋ ! ಈ
ಸಪ್ತಮ ಯತಿಗಳೇ ವರದೇಂದ್ರರಯ್ಯಾ !
ಕೃಪಾಳು ಶ್ರೀರಾಘವೇಂದ್ರರಂತಿರುವರು ॥ 41 ॥

ವರದೇಂದ್ರರು ವಾದಿಗಳಲಿ ಅತೀ ಗಂಭೀರ
ಸುರಧೇನು ರಾಘವೇಂದ್ರರಿಗೆ ಬಲು ಮೆಚ್ಚು
ಹರಿದಾಸರೆಂದರೆ ಇವರಗೆ ಬಲು ಅಕ್ಕರೆ
ಹರಿಯ ಪಾದದಲಿ ಸದಾ ರತಿ ॥ 42 ॥

ಮೂಲ ಗುರು ದಶಪ್ರಮತಿ ರಚಿಸಿದ ಸರ್ವ-
ಮೂಲದ 'ತಂತ್ರಸಾರ' ಗ್ರಂಥಕೆ
ಸುಲಭ ವ್ಯಾಖ್ಯಾನ ರಚಿಸಿದರು, ಮುಂದೆ ಶ್ರೀ ರಂಗ-
ವಲ್ಲಿದಾಸರು ಕೊಂಡಾಡಿದರು ಫಲ ಪೇಳುತ ॥ 43 ॥

ವೇದಾಂತ ಶಿಖಾಮಣಿ ವಾದಿಗಳಲಿ
ಇಂದ್ರ ವರದೇಂದ್ರರು ದೇಶದುದ್ದಕ್ಕು ಸಂಚರಿಸುತ, ದು-
ರ್ವಾದಿಗಳನು ಖಂಡಿಸುತ ದ್ವೈತಮತ ಪ್ರಚಾರ
ಮಾಡುತ ಪುಣ್ಯನಗರ ತಲುಪಿದರೊಂದು ದಿನ ॥ 44 ॥

ಪುಣ್ಯನಗರದ ಪೇಶ್ವೆಯರ ರಾಜ ದರಬಾರ ಆ-
ಸ್ಥಾನದಲಿ ಅದ್ವಿತಿಯ ಅದ್ವೈತ
ಘನ ಪಂಡಿತ ರಾಮಾಶಾಸ್ತ್ರೀ ಪ್ರಥಿತ, ಇವರ ಜೊತೆ
ಅನಪೇಕ್ಷಿತವಾಗಿ ವಾಕ್ಯಾರ್ಥಾವಕಾಶ ಒದಗಿತು ॥ 45 ॥

ವಾದವು ಶಾಸ್ತ್ರಿಗಳ ಮನೆಯಲಿ ಇಡಲ್ಪಟ್ಟಿತ್ತು
ವಾದ ಪಕ್ಷಗಳ ನಿರೀಕ್ಷಕ ಸಮಿತಿ ಏರ್ಪಡಿಸಲ್ಪಟ್ಟಿತ್ತು
ವಾದ ನಿಯಮಾವಳಿಗಳನ್ನು ಗೊತ್ತು ಮಾಡಲ್ಪಟ್ಟಿತ್ತು
ವಾದ ನೋಡಲು ಜನಸ್ತೋಮ ಸೇರಲ್ಪಟ್ಟಿತ್ತು ॥ 46 ॥

ವಾದಕೆ ಪಣ ಬಂಧವೊಂದನ್ನು ಹಾಕಲ್ಪಟ್ಟಿತ್ತು
ವಾದದಲಿ ಶ್ರೀಗಳು ಸೋತರೆ ಪೀಠವನು ತ್ಯಜಿಸಬೇಕು
ವಾದದಲಿ ಶಾಸ್ತ್ರಿಗಳು ಸೋತರೆ ಸೋಲನ್ನೊಪ್ಪಿ ಭವ್ಯ
ಸದನವನು ಶ್ರೀಗಳಿಗೆ ಅರ್ಪಿಸಬೇಕು ॥ 47 ॥

ಬಲರಾಮಾಚಾರ್ಯರೇ ಶ್ರೀ ವರದೇಂದ್ರ ತೀರ್ಥರಾಗಿದರೆಂದು
ಹಲವರಿಂದ ಅರಿತು, ಪುಣ್ಯ ಪುರಿ-
ಯಲಿ ವಾಸಿಸುವವರೆಂದು ತಿಳಿದು
ತಲುಪಿದರಲ್ಲಿ ಶೀಘ್ರದಿ ॥ 48 ॥

ಜಯರಾಮಚಾರ್ಯರ ಕಂಡು ಹರುಷಗೊಂಡು
ಸುಯತಿ ವರದೇಂದ್ರರು, ಪೇಶ್ವೆಯ ಸಮ್ಮುಖದಲಿ
ಮಾಯಾವಾದಿಗಳ ಜೊತೆ ವಾದ, ಸಿದ್ಧವಾಗೆಂದರು
ಭೂಯತಿ ರಾಯರನ್ನು ನೆನೆದು ಪ್ರಾರಂಭ ಮಾಡಿದರು ॥ 49 ॥

ವೇದ ಉಪನಿಷದ್ಗಳ ಪ್ರಮೇಯಗಳನ್ನು
ಮಂಡಿಸಿದರು, "ಅಯಮಾತ್ಮಾ ಬ್ರಹ್ಮ" ಎಂಬ
ಮಾಂಡೂಕ್ಯದ ವಾಕ್ಯಕ್ಕೆ ಆಚಾರ್ಯ
ಮಧ್ವ ಟೀಕಾಚಾರ್ಯೋಕ್ತ ಅರ್ಥವನು ವಿವರಿಸಿದರು ॥ 50 ॥

ಶ್ರೀಹರಿಯೇ ಪರಿಪೂರ್ಣ ಅಕ್ಷರ ಶಬ್ದನು
ಶ್ರೀಹರಿಯೊಬ್ಬನೇ ಅಮಿತ ಕಲ್ಯಾಣಗುಣ ಪೂರ್ಣನು
ಶ್ರೀಹರಿ ಸರ್ವ ಶಬ್ದ ವಾಚ್ಯನು
ಶ್ರೀಹರಿಯೇ ವೈಶ್ವಾರನು ॥ 51 ॥

ವಿಜ್ಞಾನಮ್ ಬ್ರಹ್ಮ, ತತ್ತ್ವಮಸಿ, ಅಹಂ ಬ್ರಹ್ಮಾಸ್ಮಿ
ಸುಜ್ಞಾನ ಶೃತಿ ವಿಚಾರಗಳ ಸರಿ ಅರ್ಥ ಪೇಳಿ, ಮಿ-
ಥ್ಯಾಜ್ಞಾನವು ತಮಸ್ಸಿಗೆ ಕಾರಣ, ಸಾಕ್ಷಾತಕಾರಕ್ಕೆ ಶು-
ದ್ಧಜ್ಞಾನ ಮುಖ್ಯ ಎಂದರು ಜಯರಾಮಾಚಾರ್ಯರು ॥ 52 ॥

ತತ್ತರಿಸಿದರು ಶಾಸ್ತ್ರಿಗಳು ಆಚಾರ್ಯರ ದಾಳಿಗೆ
ಪ್ರಥಮ ದಿನವೇ ಚಿಂತಿತರಾದರು
ಉತ್ತರ ಕೊಡುವದೆಂತಿನ್ನು ಕ್ಲಿಷ್ಟ ಪ್ರಶ್ನೆಗಳಿಗೆ ಸ-
ಮರ್ಥನಾನಲ್ಲ ಎಂದು ಭಯ ಹುಟ್ಟಿತು ॥ 53 ॥

ಮೂರ್ನಾಲ್ಕು ದಿನಗಳ ಬಳಿಕ
ನಾನು ವಾದ ಮಾಡಲಾರೆ ಆಚಾರ್ಯರ ಜೊತೆ
ನನ್ನವಾದ ಶ್ರೀಗಳ ಜೊತೆ ಒಪ್ಪಂದವೆಂದು
ನಾನಾಪರಿ ಪೇಳಿದರು ಶಾಸ್ತ್ರಿಗಳು ॥ 54 ॥

ಶ್ರೀ ವರದೇಂದ್ರರು ಶ್ರೀ ವೇದವ್ಯಾಸ
ಗುರು ಮಧ್ವ, ಮಂತ್ರಾಲಯ ಪ್ರಭು,
ಗುರು ವಸುಧೇಂದ್ರ ಗುರುಗಳನ್ನೊಮ್ಮೆ ಸ್ಮರಿಸಿ
ಪ್ರಾರಂಭ ಮಾಡಿದರು ವಾಕ್ಯಾರ್ಥವ ॥ 55 ॥

ಸ್ವತಂತ್ರಾಸ್ವತಂತ್ರ ಎಂಬು ಎರಡು
ತತ್ತ್ವಗಳು ಹರಿ ಎಂಬುವದೊಂದೇ ಸ್ವತಂತ್ರ
ತತ್ತ್ವ, ಉಳಿದವೆಲ್ಲ ಅಸ್ವತಂತ್ರ ತತ್ತ್ವಗಳು
ಸತ್ಯವಿದು ಜಗತ್ತು, ಹರಿಯು ಸರ್ವೋತ್ತಮನು ॥ 56 ॥

ಭೇದಾಭೇದವು ಪಾರಮಾರ್ಥಿಕ, ಜೀವಿಗಳಲ್ಲಿ
ಭೇದ ಸಿದ್ಧ, ಮುಕ್ತಿಯು ಪರಮ ಸುಖವೆಂದು
ಮೊದದಿ ಸಾರಿದರು ನೆರದ
ಬುಧರಿಗೆ ರಹಸ್ಯ ತತ್ತ್ವಂಗಳ ॥ 57 ॥

ಮಿಥ್ಯಾವಾದ ಖಂಡನವಾಯ್ತು, ಪಂ-
ಡಿತ ರಾಮಾಶಾಸ್ತ್ರಿಗಳು ಸೋಲನ್ನೊಪ್ಪಿದರು,
ಸತ್ಪಾತ್ರ ವರದೇಂದ್ರರ ವಾದ ಶೈಲಿಯ ನೋಡಿ ವಿ-
ದ್ವತ್ ಜನವೆಲ್ಲರು ತಲೆ ತೂಗಿದರು ॥ 58 ॥

ಜಯ ಘೋಷಣೆ ಮಾಡಿತು ಹರುಷಗೊಂಡ ಸಭೆ
ಜಯವಾಗಲಿ ಶ್ರೀ ವರದೇಂದ್ರ ಗುರು ವದಾನ್ಯರಿಗೆ
ಜಯವಾಗಲಿ ಶ್ರೀ ಜಯರಾಮಾಚಾರ್ಯರಿಗೆ
ಜಯವಾಗಲಿ ಭಾವಜ್ಞ ಪ್ರೋಚ್ಚ ಪ್ರಮಿತರಿಗೆ ॥ 59 ॥

ಸೋತ ಪಂಡಿತ ರಾಮಶಾಸ್ತ್ರಿಗಳು
ದತ್ತ ಪತ್ರವ ಬರೆದು ಗೃಹದಾನ ನೀಡಿದರು
ಕೊಟ್ಟ ಮಾತಿನಂತೆ ಚಾಚುತಪ್ಪದೆ
ಸತ್ಪಾತ್ರ ದಾನವಿದು ಶಂಭೋ ಎನುತ ॥ 60 ॥

ಐತಿಹಾಸಿಕ ಘಟನೆ ಇದು ಪ್ರಪಂಚದಲಿ
ಇತಿಹಾಸ ಮೂಡಿಸಿತು, ಇವರ ದಾನದ ದಾಖಲೆ
ಪ್ರತಿ ದೊರೆಯುವದು ಇಂದಿಗೂ
ಅತೀಂದ್ರ ವರದೇಂದ್ರ ಚಂದ್ರನ ಕೊಂಡಾಡುವದು ॥ 61 ॥

ಹಲವು ದಿನಗಳ ಬಳಿಕ ಶ್ರೀ ವರದೇಂದ್ರರ ದೇಹ
ಆಲಸ್ಯವಾಗಲು ಪೀಠ ಕೊಡಲು ನಿರ್ಧರಿಸಿದರು, ವೇದ
ಮಲ್ಲ ಜಯರಾಮಾಚಾರ್ಯರಿಗೆ ಕರೆ ಕಳುಹಿಸಿದರು
ಎಲ್ಲೆಲ್ಲೂ ಸಿಗದಿರಲು ವ್ಯಾಕುಲ ವಾದರು ॥ 62 ॥

ಇತ್ತ ಜಯರಾಮಾಚಾರ್ಯರು
ಸುತ್ತುತ್ತಿದ್ದರು ದೇಶ ಪೂರ್ತಿ
ಕ್ಷಿತಿಸುರರಿಗೆ ಮಧ್ವಮತವನ್ನು ಪೇಳುತ್ತ
ಕ್ಷೇತ್ರಗಳ ದರುಶನ ಮಾಡುತ್ತ ಕುಂಭಘೋಣಕ್ಕೆ ತಲುಪಿದರು ॥ 63 ॥

ಶ್ರೀ ವಿಜಯೀಂದ್ರರು ರಚಿಸಿದ ಚತುರರ್ಧೀಕಶತ
ಮೇರು ಗ್ರಂಥಗಳ ಗೂಢಾರ್ಥ ಓದಿ ಪೇಳಿದರು
ಗುರು ವಿಜಯೀಂದ್ರರ ಮಹಿಮೆ ಜಗದೊಳು
ಸಾರುತ, ಸೇವೆ ಮಾಡುತಲಿದ್ದರು ಕುಂಭಘೋಣದಲಿ ॥ 64 ॥

ಹೀಗೊಮ್ಮೆ ಮಧ್ಯಾಹ್ನ, ವಿಶ್ರಾಂತಿಯಲಿರು-
ವಾಗ 'ನಿಜವಾದ ವೈರಾಗ್ಯ ಬೇಕು' ಎನ್ನುವ
ಸುಗುರು ವಾದೀಂದ್ರರ ಮಾತು ಥಟ್ಟನೆ ನೆನಪಾಗಲು
ಮಗ್ನರಾದರು ಧ್ಯಾನದಲಿ ಸಂಪೂರ್ಣರಾಗಿ ॥ 65 ॥

ಅಂದು ರಾತ್ರಿ ಸ್ವಪ್ನದಲಿ ಶ್ರೀ ರಾಘವೇಂದ್ರರು
ಬಂದು, ಶ್ರೀ ವಿಜಯೀಂದ್ರರ ಬೃಂದಾವನ
ಮುಂದೆ ಫಲದ್ವಯವನಿಟ್ಟು ಪರಿವ್ರಾಜರಾಗಬೇಕು
ಮುಂದೆ ವರದೇಂದ್ರರನು ಕಾಣಬೇಕೆಂದರು ॥ 66 ॥

ಜಯರಾಮಾಚಾರ್ಯರ ಹರುಷಕೆ ಎಣೆಕಾಣೆ
ಜಯ ಕೃಷ್ಣ ಜಯ ಹರಿ ಎನುತ ತು-
ರೀಯಾಶ್ರಮಕೆ ಸಿದ್ಧರಾದರು, ಉಷಃಕಾಲದಲಿ
ಸಂಯಮರಾಗಿ ಶ್ರೀವಿಜಯೀಂದ್ರ ತೀರ್ಥರ ಬೃಂದಾವನದೆದುರಿಗೆ ॥ 67 ॥

ಫಲದ್ವಯವನ್ನಿಟ್ಟು ಸನ್ಯಾಸಾಶ್ರಮಕ್ಕೆ ಕಾಲಿಟ್ಟರು
ಫುಲ್ಲನಾಭನ ನೆನೆ ನೆನೆಯುತ
ಅಲವಬೋಧ ಗುರುಗಳ ಆಶೀರ್ವಾದ
ಬಲವೆನುತ ಸಂತೋಷದಿ ॥ 68 ॥

ದಂಡ ಕಮಂಡಲ ಪಿಡಿದು ಕೌಪೀನ ಧರಿಸಿ
ನಡೆದರು ಪುಣ್ಯನಗರಿಗೆ, ವೃತ್ತಾಂತವನ್ನೆಲ್ಲ
ಸಡಗರದಿ ಪೇಳಿ ಸ್ವೀಕಾರ ಮಾಡೆಂದು ಅರ್ತಿಯಿಂದ
ಬೇಡಿಕೊಂಡರು ಶ್ರೀ ವರದೇಂದ್ರ ಗುರುಗಳಿಗೆ ॥ 69 ॥

ಕರುಣಾಮಯಿ ಶ್ರೀ ವರದೇಂದ್ರರು ಬಲು
ಹರುಷದಿ ಜಯನಾಮ ಸಂವತ್ಸರದಲಿ ಪಟ್ಟಾಭಿಷೇಕ ಮಾಡಿ
'ಶ್ರೀ ಧೀರೇಂದ್ರ ತೀರ್ಥ'ರೆಂದು ನಾಮವ ಇಟ್ಟು
ಧರೆಯೊಳು ವಿಖ್ಯಾತನಾಗೆಂದು ಹರಸಿದರು ॥ 70 ॥

ಹಲವು ಕಾಲ ವರದೇಂದ್ರ ಗುರು –
ಗಳ ಸೇವೆ ಮಾಡುತಲಿದ್ದರು
ಬಳಿಕ ವರದೇಂದ್ರರು ಪ್ರಿಯ ಶಿಷ್ಯರಿಗೆ
ಕಳುಹಿಸಿದರು ದಿಗ್ವಿಜಯಕೆ ಅಣು ಸಂಸ್ಥಾನವನು ಕೊಟ್ಟು ॥ 71 ॥

ನಂತರ ವರದೇಂದ್ರರಿಗೆ ದೇಹಾಲಸ್ಯವಾಗಲು
ಎತ್ತ ಹೋದರು ಧೀರೇಂದ್ರರೆಂದು ಹುಡಕಿದರು
ಎತ್ತ ಸುತ್ತಿದರು ಸಿಗುವ ಸೂಚನೆ ಒಂದಿಲ್ಲ
ಚಿಂತಿತರಾದರು ಏನು ಮಾಡುವದೆಂದು ॥ 72 ॥

ಶ್ರೀರಾಮನ ಸೇವೆಗೆ ಅಡ್ಡಿ ಬರಬಾರದೆಂದು
ತಮ್ಮ ಪೂರ್ವಾಶ್ರಮದ ತಮ್ಮ ಲ–
ಕುಮಿ ನಾರಾಯಣಾಚಾರ್ಯರಿಗೆ ಆ–
ಶ್ರಮವಿತ್ತು 'ಶ್ರೀಭುವನೇಂದ್ರ ತೀರ್ಥ'ರೆಂದು ಕರೆದರು ॥ 73 ॥

ಯಾವಾಗ ಧೀರೇಂದ್ರರ ಭೇಟಿಯಾಗುವರೋ
ಆವಾಗ ಸಂಸ್ಥಾನೊಪ್ಪಿಸಬೇಕೆಂದು
ಭುವನೇಂದ್ರರಿಗೆ ಆಜ್ಞೆ ಮಾಡಿ, ನಂತರದಿ
ಗೋವಿಂದನ ಪಾದ ಸೇರಿದರು ದೇಹಾಲಸ್ಯವಾಗಿ ॥ 74 ॥

ಬುಧ ಭುವನೇಂದ್ರರು ಪುಣ್ಯನಗರಿಯಲಿ ಸುಂದರ
ಬೃಂದಾವನ ನಿರ್ಮಿಸಿ ಚರಮ ಪಾಡಿದರು
ವಾದಿಸಿಂಹ ಶ್ರೀವರದೇಂದ್ರರಿಗೆ ನಮಿಸುವೆನು
ಮೋದದಿ ದಯಪಾಲಿಸುವ ಬೇಡಿದ ವರಗಳನು ॥ 75 ॥

ಇತ್ತ ಶ್ರೀ ಧೀರೇಂದ್ರರು ಪ್ರಯಾಣ ಬೆಳೆಸಿದರು
ಉತ್ತರ ದಿಕ್ಕಿಗೆ, ಮಹಾರಾಷ್ಟ್ರದ
'ಸಾತಾರ'ದಲಿ ಇವರಿಗೆ ಭವ್ಯ ಸ್ವಾ–
ಗತ ಮುಂದೆ ಪುಣ್ಯನಗರಿಯತ್ತ ಪ್ರಯಾಣ ಬೆಳೆಸಿದರು ॥ 76 ॥

ಹಿಂದೊಮ್ಮೆ ಶಾಸ್ತ್ರಿಗಳ ವಾದದಲಿ ಅಸಾಮಾನ್ಯ
ವೇದ ವಿದುರರ ಜಯರಾಮಾಚಾರ್ಯರ
ವಾದದ ಸವಿಯನ್ನುಂಡ ಪೇಶ್ವೆ ನೃಪನು ಭವ್ಯ
ಆದರ ಸತ್ಕಾರಗಳನು ಮಾಡಿದನು ॥ 77 ॥

ಧೀರೇಂದ್ರರು, ಗುರುಗಳ ಸೇವೆಗೈಯುತ
ವರದೇಂದ್ರ ಮಠದಲ್ಲುಳಿದರು, ಹಲವು ಕಾಲ, ಭೂ-
ಸುರರಿಗೆ ವಿದ್ವತ್ ಗೋಷ್ಠೀ ನೆರವೇರಿಸಿ ಮ-
ಧುರ ಸುಧಾ ಸುಧೆಯನುಣಿಸಿದರು ॥ 78 ॥

ಹಲವು ದಿನಗಳ ಬಳಿಕ ಧೀರೇಂದ್ರರು, ಮಂತ್ರಗಳ
ಆಲಯದತ್ತ ಚರಿಸಿದರು
ಅಲ್ಲಿ ಶ್ರೀ ರಾಘವೇಂದ್ರ ವಾದೀಂದ್ರ ಗುರು
ಗಳ ದರುಶನಗೈದು ಕೃತಾರ್ಥರಾದರು ॥ 79 ॥

ಗ್ರಂಥಗಳ ರಚನೆ ಪ್ರಾರಂಭ ಮಾಡಿದರು
ನಾಥನನ್ನು ನೆನೆಯುತ್ತ, ವಾದೀಂದ್ರರ 'ಗುರುಗುಣಸ್ತವನ"
ಮಂಥನ ಮಾಡಿ ವ್ಯಾಖ್ಯಾನ ರಚಿಸಿ ರಾಘವೇಂದ್ರರ
ಗ್ರಂಥಗಳನು ಕೊಂಡಾಡಿದರು ವದನಪೂರ್ತಿ ॥ 80 ॥

'ಮಹಾನಾರಾಯಣೋಪನಿಷತ್' ಗೆ ವ್ಯಾಖ್ಯಾನ ರಚಿಸಿ
ಮಹಾ ನಾರಾಯಣನ ಅಂತರ್ಯಾಮಿತ್ವ
ಮಹತ್ತತತ್ವ ಸರ್ವೋತ್ತಮತ್ವಾದಿಗಳನು ಪೇಳಿ
ಮಹಿಪತಿಯನು ಬಿಟ್ಟು ಈ ಜಗವಿಲ್ಲವೆಂದು ಸಾರಿದರು ॥ 81 ॥

'ಮನ್ಯು ಸೂಕ್ತ'ಕೆ ವ್ಯಾಖ್ಯಾನ ರಚಿಸಿ
ಮನ್ಯು ಶಬ್ದವು ನರಸಿಂಹದೇವರಿಗೆ ಮಾತ್ರ ಮಿಸಿಲು
ಘನ್ನಮಂತ್ರವಿದು ಇನ್ನಾವ ದೇವತೆಗೂ
ಅನ್ಯಥಾ ಅರ್ಥೈಸಲಾಗದು ಎಂದು ಸಾರಿದರು ॥ 82 ॥

'ಅಂಭೃಣಿ' ಸೂಕ್ತಕೆ ವ್ಯಾಖ್ಯಾನ ರಚಿಸಿ
ಅಂಭೃಣಿ ದೇವಿಯು ವಾಯು ಬ್ರಹ್ಮಾದಿಗಳಿಂದ ವಂದ್ಯಳು
ಅಂಬುಜಾಕ್ಷನ ಪತ್ನಿಯು ಲಕುಮಿ ಮಾತೆಯು
ಕಂಬುಗ್ರೀವನ ಜೊತೆ ಸ್ತುತ್ಯಳೆಂದು ಸಾರಿದರು ॥ 83 ॥

'ಬಳಿತ್ಥಾ' ಸೂಕ್ತಕೆ ಸುಂದರ ವ್ಯಾಖ್ಯಾನ ರಚಿಸಿ
ಅಲವಭೋಧರೇ ಸಾಕ್ಷಾತ್ 'ದಶಪ್ರಮತಿ',
ಕುಲಗುರು ನಮಗೆಲ್ಲ, ಶ್ರೀಮನಮಧ್ವಾಚಾರ್ಯರಿವರು
ಇಳೆಗಿಳಿದ ಸಾಕ್ಷಾತ್ ವಾಯುದೇವರೆಂದು ಸಾರಿದರು ॥ 84 ॥

ಸಂಸ್ಕೃತ ವ್ಯಾಕರಣಕೆ 'ಕಾರಕವಾದಾರ್ಥ' ಎಂಬ
ಸಂಸ್ಕೃತ ಪ್ರೌಢ ಗ್ರಂಥ ರಚಿಸಿ
ಸುಸಂಕೃತ ಪಂಡಿತರಿಗೆಲ್ಲ ಸಂತಸ ಮೂಡಿಸಿದರು, ಇವರ
ಸಂಸ್ಕೃತ ಜ್ಞಾನ ಬಲು ಮೆಚ್ಚುವದು ॥ 85 ॥

'ವಿಷಯವಾಕ್ಯ ಸಂಗ್ರಹ' ವೆಂಬ ಗ್ರಂಥವನು ರಚಿಸಿ
ವಿಷಯ ಸಂಗ್ರಹ ಮಾಡಿದರು, ಬ್ರಹ್ಮಸೂತ್ರಗಳ
ವಿಷಯ ಶಾಸ್ತ್ರ ಪ್ರಪಂಚಕೆ
ದೋಷರಹಿತ ಪರಮಾತ್ಮನನ್ನು ಕೊಂಡಾಡಿದರು ॥ 86 ॥

ಅನೇಕ ಕಠಿಣ ಉಕ್ತಿಗಳನು ಬಿಡಿಸಿ
ಜ್ಞಾನಿಗಳ ಶಂಕೆಗಳನು ದೂರ ಮಾಡಿ ಪರಿಪರಿ ವ್ಯಾ-
ಖ್ಯಾನಗಳನು ರಚಿಸಿ ಶ್ರೀ ರಾಘವೇಂದ್ರ ವಾದೀಂದ್ರ
ಮುನಿಗಳ ಪಾದಾರವಿಂದದಲಿ ಅರ್ಪಿಸಿದರು ॥ 87 ॥

ಭುವನೇಂದ್ರರು ಮಂತ್ರಾಲಯಕೆ ಆಗಮಿಸಿದ್ದರಾಗ
ಪಾವನ ಶ್ರೀ ವರದೇಂದ್ರರಾಜ್ಞೆಯಂತೆ
ಅವನಿಪಾಲ ಶ್ರೀರಾಮನೊಪ್ಪಿಸಿದರು
ತವಕದಿ ಧೀರೇಂದ್ರರಿಗೆ ಹರುಷದಿಂದ ॥ 88 ॥

ಶ್ರೀರಾಮನ ಪೂಜೆಗೈದು ಕೃತಾರ್ಥರಾದರು
ಸೋಮಕುಲ ತಿಲಕ ರಘುರಾಮನ ಕೊಂಡಾಡಿ
ಭೂಮಿಯೊಳು ಪುಟ್ಟಿದುದಕೆ
ಮಮ ಜನುಮ ಸಾರ್ಥಕವಾಯ್ತು ಎನುತ ॥ 89 ॥

ಉತ್ತುಂಗ ಯತಿ ಧೀರೇಂದ್ರರು ಶಿಷ್ಯರೊಂದಿಗೆ
ಉತ್ತರ ಕರ್ನಾಟಕಕ್ಕೆ ದಿಗ್ವಿಜಯಗೈದರು
ಉತ್ತಮ ವರದಾ ನದೀತೀರದ
ರಿತ್ತಿ ಎಂಬ ಸುಂದರ ತಾಣಕ್ಕೆ ಆಗಮಿಸಿದರು ॥ 90 ॥

ಧೀರೇಂದ್ರರಿಗೆ ರಿತ್ತಿಯ ರೀತಿ ನೆಚ್ಚಿತು
ವರದಾ ನದೀ ತೀರದಲಿ ಪಾಠ ಪ್ರವಚನಾದಿಗಳನು
ಆರಂಭ ಮಾಡಿದರು, ಸಮೀಚಿನವಾಗಿ
ಸರುವೋತ್ತಮ ತತ್ತ್ವವನು ವಿಸ್ತರಿಸಿದರು ॥ 91 ॥

ಸುದರುಶನ ಮಹಾಚಾರ್ಯರೆಂಬ ರಾಮಾನುಜೀಯ
ಪದ್ಧತಿಯ ಶಿಷ್ಯರೊಬ್ಬ ಶ್ರೀ ಧೀರೇಂದ್ರರ ಪಾಂಡಿತ್ಯ
ಪ್ರೌಢ್ಯತೆಯ ತಲೆ ತೂಗಿ ಶಿಷ್ಯತ್ವ ಪೊತ್ತರು, ಇವರ
ವಿದ್ವತ್ ಪ್ರತಿಭೆಗೆ ಶರಣು ಶರಣೆಂಬೆ ॥ 92 ॥

ಇವರ ಕಾಲದಲಿ ಮಹನೀಯರ ಬೀಡು ಸೇರುತಿತ್ತು
ಗೋವರ್ಧನನ ಭಕುತರೆಲ್ಲ ಸೇರುತ್ತಿದ್ದರು
ದೇವಕಿ ನಂದನನ ಗುಣಗಾನ ಮಾಡುತ್ತಿದ್ದರು
ಸುವರ್ಣಯುಗ ಮತ್ತೆ ಬಂದಿತ್ತು ॥ 93 ॥

ರಾತ್ರಿಯಲಿ ಅರ್ಕನನ್ನು ಉದಯಿಸಿದ
ಯತಿಕುಲೋತ್ತಮ ಗುರುವರ ಶ್ರೀ
ಸತ್ಯಬೋಧ ತೀರ್ಥರೆಂದರೆ ಶ್ರೀ ಧೀರೇಂದ್ರರಿಗೆ
ಅತ್ಯಂತ ಗೌರವ, ತುಂಬು ಹೃದಯದಿ ಆದರ ಮಾಡುತ್ತಿದ್ದರು ॥ 94 ॥

'ಭಾಗವತ ಸಾರೋದ್ಧಾರ' ರಚಿಸಿದ ಶ್ರೀವಿಷ್ಣುತೀರ್ಥ
ಭಗವಂತನ ತತ್ವ ಸಾರುವ 'ಹರಿಕಥಾಮೃತಸಾರ' ಗ್ರಂಥಕರ್ತ
ಜಗನ್ನಾಥದಾಸ, 'ಗಾಲವಚರಿತ್ರೆ' ಕರ್ತ ಪ್ರಾಣೇಶದಾಸರೆಲ್ಲಾ
ದಿಗ್ಗಜ ಧೀರೇಂದ್ರರಿಗೆ ಪ್ರೀತಿಪಾತ್ರರು ॥ 95 ॥

ವರದ ವಾರಿಧಿ ತೀರದ ಸುರಧೇನು
ವರ ಅನುಗ್ರಹ ಶಾಪ ನಿಗ್ರಹ ಸಮರ್ಥ
ಸುರುಚ ಇವರ ಉಪನ್ಯಾಸ ಪುಂಜರಂಜಕ
ನಾರಾಯಣನಲಿ ಇವರ ಭಕ್ತಿ ಅಪರಿಮಿತ ॥ 96 ॥

ಅನ್ಯಮತ ದಿಗ್ವಿಜಯದಲಿ ಆನಂದತೀರ್ಥರಂತೆ
ದಾನ ಧರ್ಮಗಳಲಿ ಸುರದ್ರುಮರು
ಸನ್ಯಾಸದಲಿ ಶುಕಮುನಿಯಂತೆ
ಮಾನ್ಯರ ಸಾಮರ್ಥ್ಯಕ್ಕೆ ಎಣೆ ಕಾಣೆ ॥ 97 ॥

ಸುರುಗುರು ಬೃಹಸ್ಪತಿಯಂತೆ ಪಾಂಡಿತ್ಯದಲಿ
ಮೇರು ಪರ್ವದಂತೆ ಧೈರ್ಯದಲಿ
ಸಾರ ನ್ಯಾಯ ಶಾಸ್ತ್ರದಲಿ ಕಣಾದ ಮುನಿಯಂತೆ
ಗುರು ಶ್ರೀಮದ್ಧೀರೇಂದ್ರಯತಿಗಳು ಚಂದ್ರಮರು ॥ 98 ॥

ಹಲವು ದಿನಗಳುರುಳಿದ ಬಳಿಕ
ನೀಲಭನಂತಿರುವ ಧೀರೇಂದ್ರರು ಸಂಸ್ಥಾನವನು
ಅಹ್ಲಾದ ಸೂಸುವ ಭುವನೇಂದ್ರರಿಗೊಪ್ಪಿಸಿ, ರಿತ್ತಿ-
ಯಲಿ ಕಾಯ ತ್ಯಜಿಸಲು ನಿರ್ಧರಿಸಿದರು ॥ 99 ॥

'ನಿಜವಾದ ವೈರಾಗ್ಯ ಬೇಕು' ಎಂಬ
ಸುಜಯ ವಾದೀಂದ್ರರು ಉಪದೇಶ
ನಿಜವಾಯಿತು ಧನ್ಯ ಧನ್ಯ ನಾನು
ಕಂಜನಾಭನ ಕೃಪೆ ಎಂದು ಕೊಂಡಾಡಿದರು ॥ 100 ॥

ಕ್ರೋಧಿ ಸಂವತ್ಸರ ಫಾಲ್ಗುಣ ಶುಕ್ಲ ತ್ರ-
ಯೋದಶಿ ದಿನ ಕಾಯ ತ್ಯಜಿಸಿದರು
ಆದಿ ಪುರುಷ ಶ್ರೀ ರಾಮನ ನೆನೆ ನೆನೆಯುತ, ಭುವನೇಂದ್ರರು
ಬೃಂದಾವನ ನಿರ್ಮಿಸಿ ಚರಮ ಪಾಡಿದರು ॥ 101 ॥

ಧರಣಿಯೊಳು ಪ್ರಖ್ಯಾತ ಧೈರ್ಯಾದಿ ಗುಣ-
ಭರಿತ ಪರಿಶುದ್ಧ ಜ್ಞಾನ ಉಳ್ಳ
ವೀರ ಧೀರ ಕೇಸರಿ ಧೀರೇಂದ್ರ
ಗುರುಗಳಿಗೆ ಭಜಿಸುವೆನು ನಾನು ॥ 102 ॥

ಅನೇಕ ವರ್ಷಗಳು ಸಾಗಿದವು, ಬೃಂದಾ-
ವನ ನದೀ ತೀರದಲಿ ಸ್ಥಾಪಿಸಬೇಕು, ಸ್ಥಳ-
ವನು ವೀರಶೈವ ದಾನಿಯೊಬ್ಬ ಕೊಡುವನೆಂದು
ತನ್ನ ಭಕ್ತನೋರ್ವಗೆ ಪೇಳಿದರು ಸ್ವಪ್ನದಲಿ ಧೀರೇಂದ್ರರು ॥ 103 ॥

ಬಹು ವರುಷಗಳುರುಳಿವೆ ಧಾತ್ರಿಯೊಡ್ಡಿ
ದೇಹ ತೆಗೆಯುವದೆಂತು
ಮಹೋದರನ ಅನುಗ್ರಹವಿದ್ದರೆ ಅಸಾಧ್ಯವಾದ
ಮಹತ್ ಕಾರ್ಯಗಳೆಲ್ಲಾ ಸಾಧ್ಯವಾಗುವವು ॥ 104 ॥

ಸ್ವಪ್ನ ವೃತ್ತಾಂತವನೆಲ್ಲಾ ಕೇಳಿದ ಭುವನೇಂದ್ರರು
ಆಪ್ತ ಬೃಂದಾವನದ ಕಳಾಕರ್ಷನ
ಉಪೇಂದ್ರನ ಭಕುತ ಧೀರೇಂದ್ರರ ಇಚ್ಛೆಯಂತೆ
ಸಂಪಾಗಿ ಮಾಡುವದೆಂದರು ಶುಭಕಾಲದಲಿ ॥ 105 ॥

ಕೋಕನದ ಮಾಲಿಕೆಗಳನು ಕೈಯಲಿ ಪಿಡಿದು
ಭಕ್ತಾವಳಿ, ಹರಿದಾಸರ ತಿಂತಿಣಿ, ಸಮಂಗಲಿ
ಭಕುತರೆಲ್ಲ 'ಗುರುಗಳ ಭಜಿಸು ದುರಿತವ ತ್ಯಜಿಸೆಂದು'
ಬಿಂಕವ ಬಿಟ್ಟು ಗಾನ ಮಾಡುತ್ತಲಿದ್ದರು ॥ 106 ॥

ವೇದ ಘೋಷ ಮಂಗಳ ಸಮಂಗಳ
ವಾದ್ಯ ಮೇಳಗಳ ಭೋರ್ಗರೆತದ
ನಾದಗಳು ಮುಗಿಲು ಮುಟ್ಟಿತ್ತು
ಆದರದಿ ಭಕುತರು ಕಾಯುತ್ತಲಿದ್ದರು ॥ 107 ॥

ಬೃಂದಾವನದಿಂದ ದೇಹ ಹೊರ ತೆಗೆಯಲು, ಏನಾಶ್ಚರ್ಯ !
ಗಂಧ ಅಕ್ಷಂತಿ ನಳಿನ ತುಳಸಿ ಮಾಲೆಗಳು
ತೀಡಿ ಹಚ್ಚಿದ ನಾಮಾಲಂಕಾರ ಹೊಳೆಯುತಿವೆ
ಶುದ್ಧ ದರ್ಶನವಾಯ್ತು ನೆರೆದಿದ್ದ ಪುಣ್ಯವಂತರಿಗೆ ॥ 108 ॥

ಅದ್ಭುತ ಪವಾಡ ನೋಡಿ ಜನವೆಲ್ಲ ನಮಸ್ಕರಿಸುತಿದೆ
ಧಾಂಧಾಂ ಧೀರೇಂದ್ರ ತೀರ್ಥ ಎನ್ನುತಲಿದೆ
ಆದಿತ್ಯನು ನಭದಲಿ ಸಾಕ್ಷಿಯಾಗಿಪ್ಪನು, ಕಾಯುವನು
ಅಂದಣಿಯಲಿ ಮೆರವಣಿಗೆ ಮಾಡುತ ॥ 109 ॥

ವರದಾನದೀ ತೀರಕೆ ಸ್ಥಳಾಂತರಿಸಿದರು
ಭರದಿ, ಅಭಿಷೇಕಾದಿಗಳನು ವೈಭವದಿ ಮಾಡಿ-
ಹರು, ಐತಿಹಾಸಿಕದ ಘಟನೆ ಇದು 'ಭಕು-
ತರೆಲ್ಲ ಮೆಚ್ಚುವದು ಗುರುಗಳ ಭಜಿಸುವುದು' ॥ 110 ॥

ಬೃಂದಾವನದಲ್ಲಿದ್ದು ಇವರು
ನೊಂದ ಭಕುತರಿಗೆ ಸಂತಸ ನೀಡುವರು
ನಂದ ಗೋಪಾಲನ ಭಜಿಪ ಗುರು ಧೀರೇಂದ್ರರೆಂದು, ಆ-
ನಂದವನುಂಟು ಮಾಡುವರು ॥ 111 ॥

ಮೊರೆಹೊಕ್ಕವರ ಕಾಯುವವರು
ನೇರವೇರಿಸುವರು ವಾಂಛಿತ ಅಭೀಷ್ಟೆಗಳ,
ಕರ ಪಿಡಿಯುವವರು ಭವ ರೋಗ ಕಳೆಯುವರು
ಶರಣಾಗತರಿಗೆ ಸುರಧೇನು ಎಂದು ಎನಿಸಿಕೊಂಬರು ॥ 112 ॥

ಉದ್ಯೋಗ ಭಾಗ್ಯ, ಧನ ಧಾನ್ಯ ಪ್ರಾಪ್ತಿ
ವಂಧ್ಯೇಷ್ಟದಾನ, ಕಂಕಣ ಭಾಗ್ಯ
ಆದಿತ್ಯಸುತನ ದೋಷ ನಾಶ, ಧೀರೇಂದ್ರರೆಂಬ
ಚಂದಿರ ನಮ್ಮ ಸಂತಾಪ ಕಳೆಯಲಿ ॥ 113 ॥

ನಿವಾರಿಸುವರು ಕಠಿಣ ವ್ಯಾಧಿಗಳನು
ಭವದುಬ್ಬಳ ಭಯ ನಾಶ ಮಾಡಿಪರು
ನಿರ್ವಿಣ್ಣರಲ್ಲಿ ಹರುಷ ತಂದಿಹರು
ಇವರ ನಂಬಿದವರಿಗೆ ಪೊರೆವರು, ಇದಕೆ ಸಂಶಯ ಬೇಡ ॥ 114 ॥

ಮಂದಮತಿಗಳು ಪಂಡಿತರಾಗುವರು
ಪಂಡಿತರು ಜಿಜ್ಞಾಸ ಉಳ್ಳವರಾಗುವರು
ಪಂಡಿತರ ವೃಂದದಲಿ ಮೆರೆಗುವ
ಪಂಡಿತೋತ್ತಮ ಧೀರ ಧೀರೇಂದ್ರರಿಗೆ ಆ ನಮಿಪೆ ॥ 115 ॥

ಶ್ರೀ ಧೀರೇಂದ್ರರ ಸ್ಮರಣೆಯಿಂದ ಅಘ ನಾಶ
ಶ್ರೀ ಧೀರೇಂದ್ರರ ಸ್ಮರಣೆಯಿಂದ ಇಷ್ಟ ಪ್ರಾಪ್ತಿ
ಶ್ರೀ ಧೀರೇಂದ್ರರ ಸ್ಮರಣೆಯಿಂದ ಭಯ ಮಾಯ
ಶ್ರೀ ಧೀರೇಂದ್ರರ ಸ್ಮರಣೆ ಮಾಡಿದಲ್ಲಿ ಅಜಪಿತನೊಲಿವ ॥ 117 ॥

ಅಘ ಕಳೆವ ರಾಘವೇಂದ್ರ ವಾದೀಂದ್ರರು
ಸುಗುಣ ಧೀರೇಂದ್ರರ ಬಳಿ ಒಂದಂಶದಿಂದಿದ್ದು
ಜಾಗುರತಿ ಮಾಡಿಪರು ರಿತ್ತಿ ಕ್ಷೇತ್ರದ ಮಹಿಮೆ
ಪ್ರಗುಣ ಮುನಿ ಸುಶಿಲೇಂದ್ರರು ಬೇಡಿ ಬಯಸಿ
ಸುಗಮ ಮಂದಾರ ಧೀರೇಂದ್ರರ ಬಳಿಯಿದ್ದುದು ಭಕುತರ
ಭಾಗ್ಯ ಎನ್ನುವುದು ಭಜಿಸುವದು ಅನ್ನೈಕ ॥ 118 ॥

ಎನ್ನ ಪ್ರಾಚೀನ ಸತ್ಕರ್ಮ ಸೆಳೆಯಿತು ನಾನರಿಯೆ
ದೀನ ನಾನು ಬಂದಿಹೆನು ನಿಮ್ಮ ಶರಣದಲಿ

ಎನ್ನ ದೋಷಂಗಳನು ಎಣಿಸದೆ ಪಾರುಗಾಣಿಸು
ದೊರೆಯೆ ವಾಸವನುತನ ಭಕುತನೆ ॥ 119 ॥

ಮಂಗಳವಾಗಲಿ ಶ್ರೀ ರಾಘವೇಂದ್ರರ ಪ್ರಿಯರಿಗೆ
ಮಂಗಳವಾಗಲಿ ಶ್ರೀ ವಾದೀಂದ್ರರ ಪುತ್ರರಿಗೆ
ಮಂಗಳವಾಗಲಿ ಶ್ರೀ ವರದೇಂದ್ರರ ಕರ ಸಂಜಾತರಿಗೆ
ಮಂಗಳವಾಗಲಿ ಶ್ರೀ ಧೀರೇಂದ್ರ ತೀರ್ಥರಿಗೆ ॥ 120 ॥

ಶ್ರೀ ಧೀರಸಿಂಹ ಧೀರೇಂದ್ರ ಗುರುಗಳ ಈ ಮಂಗಳ
ಚರಿತೆ ಓದಿ ಕೇಳಿ ಪೇಳಲು ಸುಖ ಪ್ರಾಪ್ತಿಯಾಗುವದು
ಹರಿ ಭಕುತಿ ಹೆಚ್ಚುವದು ನಿಶ್ಚಿತ
ಸಿರಿ 'ವೇದ ವಿಠಲನು' ಪ್ರಸನ್ನನಾಗುವನು ॥ 121 ॥

॥ ಶ್ರೀ ಕೃಷ್ಣಾರ್ಪಣಮಸ್ತು ॥



ಶ್ರೀ ಮಾದನೂರು ವಿಷ್ಣುತೀರ್ಥ ಮಹನಿಯರು ರಚಿಸಿದ
ಶ್ರೀ ಭಾಗವತ ಸಾರೋದ್ಧಾರ ಗ್ರಂಥದ ಉಪಸಂಹಾರದಲ್ಲಿ ಮಾಡಿದ
ಶ್ಲೋಕ –

ನ ವಿದ್ಯಾ ಮದತೋ ನಾಪಿ ಪ್ರತಿಷ್ಠಾ ಕಾಮತಃ ಕ್ವಚಿತ್ ।
ಕಿಂತು ಶ್ರೀ ಹರಿಪಾದಾಬ್ಜರತಿಃ ಸ್ಯಾದಿತ್ಯಯಂ ಶ್ರಮಃ ॥

[ಅರ್ಥಾತ್ : ಪಾಂಡಿತ್ಯದ ಗರ್ವದಿಂದಾಗಲೀ, ಘನ ಗೌರವಗಳನ್ನು ಹೊಂದಬೇಕೆಂಬ ಇಚ್ಛೆಯಿಂದ ಈ ಗ್ರಂಥವನ್ನು ಬರೆಯಲಿಲ್ಲ. ಕೇವಲ ಶ್ರೀ ಹರಿಯ ಪಾದ ಪದ್ಮಗಳಲ್ಲಿ ನನ್ನ ಭಕ್ತಿ ನೆಲಸಲೆಂದು ಪರಿಶ್ರಮ ಮಾಡಿದ್ದೇನೆ].



ಶ್ರೀ ಧೀರೇಂದ್ರ ತೀರ್ಥರು ಮಾಧ್ವ ಸಂಪ್ರದಾಯದಲ್ಲಿ ಬರುವ ಶ್ರೇಷ್ಠರಾದ ಯತಿಗಳು, ದಿಗ್ಗಜ ವಾದಿಗಳು, ಗ್ರಂಥಕಾರರು, ಅನೇಕ ಪ್ರಮುಖ ಸೂಕ್ತಗಳಿಗೆ ಟಿಪ್ಪಣಿ ರಚಿಸಿದ ಕೋವಿದರು, ಪಿತನ ವಾಕ್ಯ ಪರಿಪಾಲಿಸಿದ ಪುತ್ರರು, ಪ್ರತಿ ಕ್ಷಣ, ಪ್ರತಿ ವಸ್ತುವಿನಲ್ಲಿಯೂ ಪರಮಾತ್ಮನನ್ನು ಕಂಡು ಭಜಿಸಿದ ದೇವ ಭಕ್ತರು, ಪೀಠಕ್ಕೂ ಆಸೆ ಪಡಲಾರದ ವಿರಕ್ತ ಶಿಖಾಮಣಿಗಳು, ದುರ್ಮತಗಳನ್ನು ಸರ್ವಥಾ ಖಂಡಿಸಿದ ಜ್ಞಾನಿ ಸಿಂಹರು. ಮಧ್ವ ಶಾಸ್ತ್ರವೇ ಇವರ ಉಸಿರಾಗಿತ್ತು. ಶ್ರೀ ವಿಜಯೀಂದ್ರರ, ಶ್ರೀ ರಾಘವೇಂದ್ರರ, ಶ್ರೀ ವಾದೀಂದ್ರರ ಮತ್ತು ಶ್ರೀ ವರದೇಂದ್ರರ ಸಂಪೂರ್ಣ ಕೃಪೆಗೆ ಪಾತ್ರರು. ಅನೇಕ ಶಿಷ್ಯರಿಗೆ ಮಧ್ವ ಶಾಸ್ತ್ರ ಬೋಧಿಸಿ, ಹರಿದಾಸರಿಗೆ ಪ್ರಚೋದನೆ ಕೊಟ್ಟು, ದಾಸ ಸಾಹಿತ್ಯ ಬೆಳೆಸಿದ ಮಹನೀಯರು. ಅತ್ಯಂತ ಕರುಣೆ ಅನುಕಂಪ ಹೊಂದಿದವರು. ಶ್ರೀ ಆನಂದತೀರ್ಥಾಂತರ್ಗತ ಶ್ರೀ ಲಕ್ಷ್ಮೀ ನರಸಿಂಹನ ಪಾದದಲ್ಲಿ ಸದಾ ನಿರತರಾಗಿರುವ ಶ್ರೀ ಧೀರೇಂದ್ರ ತೀರ್ಥರ ಚರಿತ್ರೆ ತಿಳಿದವನೇ ಪುಣ್ಯವಂತ. ಇಂಥಹ ಗುರುಗಳ ಕರುಣೆ ನಮ್ಮ ಮೇಲೆ ಸದಾ ಇರಲಿ ಎಂದು ಅತ್ಯಂತ ಭಕ್ತಿಯಿಂದ ಪ್ರಾರ್ಥಿಸುವೆ.

'ವೇದವಿಠಲ'